पूर्णप्रज्ञसंशोधनमन्दिरम्
नवदेहलीस्थमानवसंसाधनविकासमन्त्रालयाधीन-
राष्ट्रियसंस्कृतसंस्थानेन सम्मानितम्

श्रीमदानन्दतीर्थभगवत्पादाचार्यविरचितम्

# श्रीमद्ब्रह्मसूत्रभाष्यम्

श्रीजगन्नाथयतिविरचितभाष्यदीपिका-सूत्रदीपिकासहितम्

(द्वितीयोऽध्यायः)

सम्पादकः
विद्वान् रङ्गनाथ कट्टिः एम्.ए.एम्.फिल्
उपनिदेशकः, पूर्णप्रज्ञसंशोधनमन्दिरम्, बेङ्गलूरु-२८

प्रकाशनम्
पूर्णप्रज्ञसंशोधनमन्दिरम्
पूर्णप्रज्ञविद्यापीठम्, बेङ्गलूरु-२८

२००८

पूर्णप्रज्ञसंशोधनमन्दिरम्
नवदेहलीस्थमानवसंसाधनविकासमन्त्रालयाधीन-
राष्ट्रियसंस्कृतसंस्थानेन सम्मानितम्

श्रीमदानन्दतीर्थभगवत्पादाचार्यविरचितम्

# श्रीमद्ब्रह्मसूत्रभाष्यम्

श्रीजगन्नाथयतिविरचितभाष्यदीपिका-सूत्रदीपिकासहितम्

(द्वितीयोऽध्यायः)

सम्पादकः

विद्वान् रङ्गनाथ कट्टिः एम्.ए. एम्.फिल्

उपनिदेशकः , पूर्णप्रज्ञसंशोधनमन्दिरम् बेङ्गलूरु - २८

प्रकाशनम्

पूर्णप्रज्ञसंशोधनमन्दिरम्

पूर्णप्रज्ञविद्यापीठम्, बेङ्गलूरु - २८

२००८

पूर्णप्रज्ञसंशोधनमन्दिरग्रन्थमाला - ४९

श्रीमदानन्दतीर्थभगवत्पादाचार्यविरचितं **श्रीमद्ब्रह्मसूत्रभाष्यम्**

श्रीजगन्नाथयतिविरचितभाष्यदीपिकासूत्रदीपिकासहितम् (द्वितीयोऽध्यायः)

सम्पादकः **विद्वान्. रङ्गनाथ कट्टिः** एम्.ए.एम्.फिल्

उपनिदेशकः, पूर्णप्रज्ञसंशोधनमन्दिरम् बेङ्गलूरु – २८

*This Publication is brought out by the generous financial help of*

**Rashtriya Sanskrit Samsthan, (Deemed University ) New Delhi**

प्रकाशनम् -

**पूर्णप्रज्ञसंशोधनमन्दिरम्**

पूर्णप्रज्ञविद्यापीठम्, कत्तरिगुप्पा मेन्रोड्, बेङ्गलूरु - २८

| | |
|---|---|
| पुटानि | : ५६ + ४४५ |
| प्रथममुद्रणम् | : २००८ |
| मुद्रितप्रतिसङ्ख्या | : १००० |
| मूल्यम् | : २०० रूप्यकाणि |
| मुद्रणालयः | : राष्ट्रोत्थान मुद्रण |

**POORNAPRAJNA SAMSHODHANA MANDIRAM**

Recognised by Rashtriya Sanskrit Samsthan, (Deemed University)
Ministry of H.R.D., Govt. of India, New Delhi

# ŚRIMAD BRAHMASŪTRA BHĀṢYAM

of

**Sri Madhwacharya**

with Bhashyadeepika and Sutradeepika of

**Sri Jagannathatirtha**

**(Chapter 2)**

Editor :

**Vidwan. Ranganatha Katti . M.A. M.Phil.**
Deputy Director, Poornaprajna Samshodhana Mandiram,
Bangalore-28

**Publisher :**
Poornaprajna Samshodhana Mandiram,
Poornaprajna Vidyapeetha, Bangalore -560 028

**2008**

Poornaprajna Samshodhana Mandiram Series No. 49

# **Srimad Brahma Sutra Bhashyam** of Sri Madhwacharya with Bhashyadeepika and Sutradeepika of Sri Jagannathatirtha (Adhyaya 2)

Editor : **Vidwan. Ranganatha Katti**
Deputy Director, Poornaprajna Samshodhana Mandiram,
Bangalore-28

Published by :

**Poornaprajna Samshodhana Mandiram**
Poornaprajna Vidyapeetha, Katriguppa Main Road,
Bangalore -560 028

*This Publication is brought out by the generous financial help of*

**Rashtriya Sanskrit Samsthan, (Deemed University ), New Delhi**

| | |
|---|---|
| Pages | :56+445 |
| First Edition | :2008 |
| Copies | :1000 |
| Price | :200/- |
| Printed by | : Rashtrotthana Mudrana |

# अनुग्रहसन्देशः

हनुमद्भाष्यस्य गाम्भीर्यं देवोत्तमैर्गेगीयमानं नाल्पप्रज्ञैर्विज्ञेयमिति च विद्यावृद्धानां शास्त्रपारावारपारङ्गतानां महातपस्विनां दृढोक्तिः। यथाऽऽहुः– 'सहस्रार्थस्य भाष्यस्य' इति 'आनन्दतीर्थ-भगवद्वचसां विशिष्टव्याख्यानकर्मणि सुरा ह्यधिकारिणोऽत्र' इति च।

यद्यपि श्रीमज्जयतीर्थपूज्यचरणैः तत्त्वप्रकाशिकायां हृद्ययाऽनवद्यया च शैल्या भाष्यव्याख्यानं व्यधायि। तथाऽप्यध्येतॄणां विदुषामपि भगवत्पादाचार्योल्लिखितश्रुतिस्मृतीनां प्रतिपदार्थविज्ञानं क्लेशावहं भवति। जगन्नाथतीर्थप्रणीतेयं भाष्यदीपिकाऽन्वर्थनामिका भाष्योदाहृतश्रुतिस्मृतिव्याख्यानपरा तत्रतत्र व्याख्यानान्तर-विमर्शनदक्षा च राजतेतमाम्। यद्यप्ययं ग्रन्थः पञ्चाशद्वर्षेभ्यः प्राक् व्यासराजममठाधीशैः श्रीविद्यापयोनिधितीर्थस्वामिभिः मुद्रापित आसीत्। अध्येतॄणामिदानीं मुद्रितग्रन्थानामनुपलब्धत्वात् पुनर्मुद्रणार्थमादेशः प्रादायि। पूर्णप्रज्ञसंशोधनमन्दिरोपनिदेशकः, अस्मत्प्रियच्छात्रः रङ्गनाथ कट्टि इत्युपाह्वः द्वितीयाध्यायस्य नैकमातृकास्थपाठान्तरोल्लेखनपुरस्सरं महता यत्नेन शुद्धपाठं निर्धार्य ग्रन्थमेतं समर्पितवान्। अस्येमां शास्त्रसेवां वयं सानन्द-मभिनन्दामः॥

*इत्यनेकनारायणस्मरणानि*

**श्रीश्रीविश्वेशतीर्थश्रीपादाः**
श्रीपेजावराधोक्षजमठः, उडुपि

दि. १-२-२००८
पूर्णप्रज्ञविद्यापिठम्, बेङ्गळूरु

## Director's Note

In the lineage of Sri Vyasaraja matha,many stalwarts have made luxurious contributions to the Madhva School of thought. Among them Sri Jagannatha Yati stands out as a champion. He is more known by his work and rightly called Bhashya Deepikacharya than by his Ashrama name as Sri Jagannatha Yati.

This Speaks of the uniqueness of the work he has given to the scholarly world. In Tatwa Prakashika teeka on Brahma Sutra Bhashya, all the valid references quoted by Sri Madhvacharya have not been explained. There was an absolute need for clarifications and explanations even for scholars who had made in depth, study of Vedas and Upanishads. Sri Jagannatha Yati thus has helped the genuine seekers by giving lucid and straight forward notes on such references and his own point of view, strengthening by understanding Tatwa Prakashika, While appreciating and admiring the earlier works of his seniors. He thus brings and the perfect unity and of thought and logic in the works of Sri Madhvacharya where, in some places, the chances of misreading and disjoints are there if not read between lines. He shows how superficial readings contd me misleading. He stresses that not only a through study with devotion to the supreme could lead to the correct understanding of the interpretation of Sri Madhvacharya, paying glorious tributes to him.

Like Brahmasutra Bhashya, this great work, on the same line is unique in style and presentation of the valuable content. The very little is quite apt and befitting, giving many dimensions to the subject.

This great work was published some 80-Years ago, for the first time. During the reign of Sri Vidyapayonidhitirtha of Sri Vyasaraj matha, the second Edition was brought out.

They are out-of-stock now. As many genuine seekers were asking for it, we have undertaken this Publication.

The source of inspiration behind this useful venture is our founder H.H. SriSri Vishveshatirtha Swamiji. We express our gratitude and Pranamas.

We express our gratitude to Prof. V. Kutumba Sastry, Vice-chancellor of Rashtriya Sanskrit Sansthan, New Delhi and Sri C.S. Kaniyal, Finance Officer, Rashtriya Sanskrit Sansthan, New Delhi, for giving all-round support in academic activities.

Going through the manuscriple given by the well-known scholar of Dharwad Sri Govinda Rao Navalgundkar and the manuscripts of Research Institute, Vidwan Ranganatha Katti has taken a lot of effort to specify the textual differences. He has been able to fix the correct texts at places which highlights and supports the utility.

I heartily congratulate Vidwan Ranganatha Katti for this useful work.

I thank the Rashtrotthana Mudrana, for their co-operation and for the neat get up.

*Sujanavidheya*

**Dr. A.V. Nagasampige**

**Director**

**Poornaprajna Samshodhana Mandhlram**

# ಪ್ರಸ್ತಾವನೆ

ದ್ವಾಪರಯುಗದಲ್ಲಿ ಕಾಲದ ಪ್ರಾಬಲ್ಯದಿಂದ ಹಾಗೂ ಗೌತಮರ ಶಾಪದಿಂದ ತತ್ವಜ್ಞಾನ ಲೋಪವಾದಾಗ, ಸುಜನರ ಮೇಲಿನ ಕರುಣೆಯಿಂದ ಬ್ರಹ್ಮರುದ್ರಾದಿದೇವತೆಗಳು ಭಗವಂತನನ್ನು ಮೊರೆಹೊಕ್ಕರು. ಭೂಮಿಯಲ್ಲಿ ಅವತರಿಸಿ ಜಗತ್ತಿಗೆ ಜ್ಞಾನಾಮೃತವನ್ನು ಉಣಬಡಿಸಬೇಕೆಂದು ಪರಿಪರಿಯಿಂದ ಪ್ರಾರ್ಥಿಸಿದರು. ಅವರ ಪ್ರಾರ್ಥನೆಯ ಮೇರೆಗೆ ಭಗವಂತ ಯಮುನಾದ್ವೀಪದಲ್ಲಿ ಪರಾಶರರಿಂದ ಸತ್ಯವತಿಯಲ್ಲಿ ಪ್ರಾದುರ್ಭವಿಸಿದ. ವೇದಗಳನ್ನು ವಿಭಜಿಸಿ ವೇದವ್ಯಾಸನೆನಿಸಿದ. ವೇದಾನಧಿಕಾರಿಗಳಾದ ಸ್ತ್ರೀಶೂದ್ರಾದಿಗಳ ಮೇಲಿನ ದಯೆಯಿಂದ ಮಹಾಭಾರತವನ್ನು ರಚಿಸಿಕೊಟ್ಟ. ಹದಿನೆಂಟು ಪುರಾಣಗಳನ್ನು ರಚಿಸಿ ಸಂಸ್ಕೃತಸಾಹಿತ್ಯವನ್ನು ಶ್ರೀಮಂತಗೊಳಿಸಿದ ಧೀಮಂತ ವ್ಯಾಸರೂಪಿ ಭಗವಂತ, ವೇದಾರ್ಥನಿರ್ಣಾಯಕಗಳಾದ ಬ್ರಹ್ಮಸೂತ್ರಗಳನ್ನು ರಚಿಸಿ ಸುಜನರಿಗೆ ಅಪಾರ ಉಪಕಾರಮಾಡಿದ. ಇದನ್ನೇ ವಾದಿರಾಜ ಗುರುಸಾರ್ವಭೌಮರು ಯುಕ್ತಿಮಲ್ಲಿಕೆಯಲ್ಲಿ–

**ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ ।**
**ತದುಕ್ತೌ ಕಸ್ಯ ನ ಶ್ರದ್ಧಾ ಯದುಚ್ಛಿಷ್ಟಂ ಜಗತ್ತ್ರಯಮ್ ॥**

*(ಯು.ಮ.ಗು.ಸೌ. ಶ್ಲೋಕ. 117)*

**ಸರ್ವೋಪನಿಷದಾಮರ್ಥಂ ನಿರ್ಣೇತುಂ ಬಾದರಾಯಣಃ ।**
**ನಿರ್ಮಮೇ ಬ್ರಹ್ಮಸೂತ್ರಾಣಿ ಸೂಚನಾತ್ ಸೂತ್ರಮುಚ್ಯತೇ ॥**

*(ಯು.ಮ.ಭೇ.ಸೌ. ಶ್ಲೋಕ.93)*

ಎಂದು ಬಣ್ಣಿಸಿದ್ದಾರೆ.

ಇಂತಹ ಪವಿತ್ರ ಬ್ರಹ್ಮಸೂತ್ರಗಳನ್ನು ತಮ್ಮ ಅಪವ್ಯಾಖ್ಯಾನಗಳಿಂದ ಕಲುಷಿತಗೊಳಿಸಲು ಇತರರು ಪ್ರಯತ್ನಿಸಿದಾಗ ವಾಯುದೇವರು ಭಗವಂತನ ಆಜ್ಞೆಯಂತೆ ಭೂಮಿಯಲ್ಲಿ ಅವತರಿಸಿ, ಇತರರಿಗೆ ಮಾಡಲಿಕ್ಕೆ ಅಶಕ್ಯವಾದ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿ ಇತರ ದುರ್ಭಾಷ್ಯಗಳನ್ನು ವೇದಸದ್ಯುಕ್ತಿಗಳಿಂದ ಖಂಡಿಸಿದರು.

**ಸೂತ್ರಭಾಷ್ಯದ ವೈಶಿಷ್ಟ್ಯ –**

ಆಚಾರ್ಯರ ಸೂತ್ರಭಾಷ್ಯವು ಹಿಂದಿನ ಮುಂದಿನ ಇಂದಿನ ಯಾರಿಂದಲೇ ಆಗಲೀ ಖಂಡಿಸಲಿಕ್ಕೆ ಅಶಕ್ಯವಾಗಿದ್ದು ಆಚಾರ್ಯರ ಮತ್ತೊಂದು ರೂಪದಂತಿದೆ.

This great work was published some 80-Years ago, for the first time. During the reign of Sri Vidyapayonidhitirtha of Sri Vyasaraj matha, the second Edition was brought out.

They are out-of-stock now. As many genuine seekers were asking for it, we have undertaken this Publication.

The source of inspiration behind this useful venture is our founder H.H. SriSri Vishveshatirtha Swamiji. We express our gratitude and Pranamas.

We express our gratitude to Prof. V. Kutumba Sastry, Vice-chancellor of Rashtriya Sanskrit Sansthan, New Delhi and Sri C.S. Kaniyal, Finance Officer, Rashtriya Sanskrit Sansthan, New Delhi, for giving all-round support in academic activities.

Going through the manuscriple given by the well-known scholar of Dharwad Sri Govinda Rao Navalgundkar and the manuscripts of Research Institute, Vidwan Ranganatha Katti has taken a lot of effort to specify the textual differences. He has been able to fix the correct texts at places which highlights and supports the utility.

I heartily congratulate Vidwan Ranganatha Katti for this useful work.

I thank the Rashtrotthana Mudrana, for their co-operation and for the neat get up.

*Sujanavidheya*

**Dr. A.V. Nagasampige**

**Director**

**Poornaprajna Samshodhana Mandhiram**

# ಪ್ರಸ್ತಾವನೆ

ದ್ವಾಪರಯುಗದಲ್ಲಿ ಕಾಲದ ಪ್ರಾಬಲ್ಯದಿಂದ ಹಾಗೂ ಗೌತಮರ ಶಾಪದಿಂದ ತತ್ವಜ್ಞಾನ ಲೋಪವಾದಾಗ, ಸುಜನರ ಮೇಲಿನ ಕರುಣೆಯಿಂದ ಬ್ರಹ್ಮರುದ್ರಾದಿದೇವತೆಗಳು ಭಗವಂತನನ್ನು ಮೊರೆಹೊಕ್ಕರು. ಭೂಮಿಯಲ್ಲಿ ಅವತರಿಸಿ ಜಗತ್ತಿಗೆ ಜ್ಞಾನಾಮೃತವನ್ನು ಉಣಬಡಿಸಬೇಕೆಂದು ಪರಿಪರಿಯಿಂದ ಪ್ರಾರ್ಥಿಸಿದರು. ಅವರ ಪ್ರಾರ್ಥನೆಯ ಮೇರೆಗೆ ಭಗವಂತ ಯಮುನಾದ್ವೀಪದಲ್ಲಿ ಪರಾಶರರಿಂದ ಸತ್ಯವತಿಯಲ್ಲಿ ಪ್ರಾದುರ್ಭವಿಸಿದ. ವೇದಗಳನ್ನು ವಿಭಜಿಸಿ ವೇದವ್ಯಾಸನೆನಿಸಿದ. ವೇದಾನಧಿಕಾರಿಗಳಾದ ಸ್ತ್ರೀಶೂದ್ರಾದಿಗಳ ಮೇಲಿನ ದಯೆಯಿಂದ ಮಹಾಭಾರತವನ್ನು ರಚಿಸಿಕೊಟ್ಟ. ಹದಿನೆಂಟು ಪುರಾಣಗಳನ್ನು ರಚಿಸಿ ಸಂಸ್ಕೃತಸಾಹಿತ್ಯವನ್ನು ಶ್ರೀಮಂತಗೊಳಿಸಿದ ಧೀಮಂತ ವ್ಯಾಸರೂಪಿ ಭಗವಂತ, ವೇದಾರ್ಥನಿರ್ಣಾಯಕಗಳಾದ ಬ್ರಹ್ಮಸೂತ್ರಗಳನ್ನು ರಚಿಸಿ ಸುಜನರಿಗೆ ಅಪಾರ ಉಪಕಾರಮಾಡಿದ. ಇದನ್ನೇ ವಾದಿರಾಜ ಗುರುಸಾರ್ವಭೌಮರು ಯುಕ್ತಿಮಲ್ಲಿಕೆಯಲ್ಲಿ–

**ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ ।**
**ತದುಕ್ತೌ ಕಸ್ಯ ನ ಶ್ರದ್ಧಾ ಯದುಚ್ಛಿಷ್ಟಂ ಜಗತ್ತ್ರಯಮ್ ॥**

*(ಯು.ಮ.ಗು.ಸೌ. ಶ್ಲೋಕ. 117)*

**ಸರ್ವೋಪನಿಷದಾಮರ್ಥಂ ನಿರ್ಣೇತುಂ ಬಾದರಾಯಣಃ ।**
**ನಿರ್ಮಮೇ ಬ್ರಹ್ಮಸೂತ್ರಾಣಿ ಸೂಚನಾತ್ ಸೂತ್ರಮುಚ್ಯತೇ ॥**

*(ಯು.ಮ.ಭೇ.ಸೌ. ಶ್ಲೋಕ.93)*

ಎಂದು ಬಣ್ಣಿಸಿದ್ದಾರೆ.

ಇಂತಹ ಪವಿತ್ರ ಬ್ರಹ್ಮಸೂತ್ರಗಳನ್ನು ತಮ್ಮ ಅಪವ್ಯಾಖ್ಯಾನಗಳಿಂದ ಕಲುಷಿತಗೊಳಿಸಲು ಇತರರು ಪ್ರಯತ್ನಿಸಿದಾಗ ವಾಯುದೇವರು ಭಗವಂತನ ಆಜ್ಞೆಯಂತೆ ಭೂಮಿಯಲ್ಲಿ ಅವತರಿಸಿ, ಇತರರಿಗೆ ಮಾಡಲಿಕ್ಕೆ ಅಶಕ್ಯವಾದ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿ ಇತರ ದುರ್ಭಾಷ್ಯಗಳನ್ನು ವೇದಸದ್ಯುಕ್ತಿಗಳಿಂದ ಖಂಡಿಸಿದರು.

**ಸೂತ್ರಭಾಷ್ಯದ ವೈಶಿಷ್ಟ್ಯ –**

ಆಚಾರ್ಯರ ಸೂತ್ರಭಾಷ್ಯವು ಹಿಂದಿನ ಮುಂದಿನ ಇಂದಿನ ಯಾರಿಂದಲೇ ಆಗಲೀ ಖಂಡಿಸಲಿಕ್ಕೆ ಅಶಕ್ಯವಾಗಿದ್ದು ಆಚಾರ್ಯರ ಮತ್ತೊಂದು ರೂಪದಂತಿದೆ.

**'ಸೂತ್ರಾರ್ಥೋ ವರ್ಣ್ಯತೇ ಯತ್ರ [1]ಪದೈಃ ಸೂತ್ರಾನುಕಾರಿಭಿಃ ।**
**ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥**

ಎಂಬ ಭಾಷ್ಯ ಲಕ್ಷಣದಿಂದ ಯುಕ್ತವಾಗಿದ್ದು ನಿರ್ದುಷ್ಟವಾಗಿದೆ. ಗಹನವೂ ಗಂಭೀರವೂ ಆಗಿರುವ ಈ ಭಾಷ್ಯ ತತ್ತ್ವಜಿಜ್ಞಾಸುಗಳಾದ ಸುಜನರಿಗೆ ಸುಲಭವಾಗಿ ಎಟಕುವಂತಿದ್ದರೆ ದುರಹಂಕಾರಿಗಳಾದ ಪ್ರತಿವಾದಿಗಳಿಗೆ ಭಯಂಕರವಾಗಿದೆ. ಆದ್ದರಿಂದಲೆ ನಾರಾಯಣಪಂಡಿತರು ಮಧ್ವವಿಜಯದಲ್ಲಿ '**ಸೌಮ್ಯಕಾಂತಿ ಚ ವಿಪಕ್ಷಭೀಷಣಂ**' ಎಂದಿದ್ದಾರೆ. ಇಂತಹ ಭಾಷ್ಯದ ಆಶಯವನ್ನು ಅರಿಯಲು ಉಪಯುಕ್ತವಾದ ವ್ಯಾಖ್ಯಾನಗ್ರಂಥಗಳು ನಾಲ್ಕು.

1. ಶ್ರೀ ತ್ರಿವಿಕ್ರಮಪಂಡಿತರ **'ತತ್ತ್ವಪ್ರದೀಪ'**
2. ಶ್ರೀ ಪದ್ಮನಾಭತೀರ್ಥರ **'ಸತ್ತರ್ಕದೀಪಾವಲೀ'**
3. ಶ್ರೀ ಜಯತೀರ್ಥರ **'ತತ್ತ್ವಪ್ರಕಾಶಿಕಾ'**
4. ಶ್ರೀ ಜಗನ್ನಾಥಯತಿಗಳ **'ಭಾಷ್ಯದೀಪಿಕಾ'**

ಇವುಗಳಲ್ಲಿ ಭಾಷ್ಯದ ಒಟ್ಟಾರೆ ಅಭಿಪ್ರಾಯವನ್ನು ಗ್ರಹಿಸಲು ಅತ್ಯುಪಯುಕ್ತವಾದ ಗ್ರಂಥ ಭಾಷ್ಯದೀಪಿಕಾ.

## ಶ್ರೀಜಗನ್ನಾಥತೀರ್ಥರು ಮತ್ತು ಭಾಷ್ಯದೀಪಿಕಾ

ವ್ಯಾಸರಾಯಮಠದ ಪರಂಪರೆಯಲ್ಲಿ ಬಂದ ಶ್ರೀರಘುನಾಥತೀರ್ಥರಿಂದ ಸನ್ಯಾಸದೀಕ್ಷೆಯನ್ನು ಸ್ವೀಕರಿಸಿದ ಮಹನೀಯರು ಶ್ರೀಜಗನ್ನಾಥತೀರ್ಥರು. '**ದ್ವೈತ ವೇದಾಂತವಾಙ್ಮಯ ಹಾಗೂ ಇತಿಹಾಸ**' ಎಂಬ ಗ್ರಂಥಲ್ಲಿ ಆಧುನಿಕ ಸಂಶೋಧಕರಾದ ಡಾ॥ ಬಿ.ಎನ್.ಕೆ.ಶರ್ಮ ಅವರು ಹೇಳುವಂತೆ ಕ್ರಿ.ಶ. 1755ರಿಂದ 1770ರವರೆಗೆ ಸುಮಾರು 15ವರ್ಷಗಳ ಕಾಲ ಪೀಠಾಧಿಪತಿಗಳಾಗಿ ಮೆರೆದ ಹಿರಿಮೆ ಇವರದು. ತಮ್ಮ ಜೀವಿತಕಾಲದಲ್ಲಿ ಎದುರಾದ ಅನೇಕ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಿದ ಎದೆಗಾರಿಗೆ ಇವರದು.

## ನರಸಿಂಹನ ಪರಮಾನುಗ್ರಹಪಾತ್ರರು

ಒಮ್ಮೆ ಇವರು ಸಂಚಾರದಲ್ಲಿದ್ದಾಗ ದುಷ್ಟಯವನರ ಗುಂಪೊಂದು ಖಡ್ಗಗಳನ್ನು ಝಳಪಿಸುತ್ತಾ ದಿಢೀರನೆ ಇವರ ಮೇಲೆ ಎರಗಿತಂತೆ. ಆಗ ಶ್ರೀಜಗನ್ನಾಥಯತಿಗಳು ಭಯಭಂಜಕನಾದ ನರಸಿಂಹನನ್ನು ಮನಸಾರೆ ಸ್ಮರಿಸಿದರಂತೆ. ಕೂಡಲೇ ಅದ್ಭುತ

1. '**ವಾಕ್ಯೈಃ ಸೂತ್ರಾನುಕಾರಿಭಿಃ**' ಎಂಬುದಾಗಿಯೂ ಕೆಲವೆಡೆ ಪಾಠ ಕಂಡುಬರುವದು.

ಘಟನೆಯೊಂದು ನಡೆಯಿತು. ಅಲ್ಲೇ ಹತ್ತಿರದಲ್ಲಿ ಮಾವಿನ ಮರದಿಂದ ವಿಚಿತ್ರಶಕ್ತಿಯೊಂದು ಪ್ರಾದುರ್ಭವಿಸಿ ದುಷ್ಟಯವನರ ಗುಂಪನ್ನು ಹೊಡೆದೋಡಿಸಿತಂತೆ. ಈ ವಿಷಯವು–

**ಆಮ್ರಸ್ತಂಭಾತ್ ಸಮಾಗತ್ಯ ತಾಮ್ರತುಂಡಾನ್ ನಿಹತ್ಯ ಯಃ ।**
**ನಮ್ರಂ ನೌಮಿ ಜಗನ್ನಾಥಂ ಕಮ್ರೋಽಪಾತ್ತಂ ನೃಕೇಸರೀ ॥**

ಎಂಬ ಅವರ 'ಭಾಷ್ಯದೀಪಿಕಾ'ದ ಮಂಗಲಾಚರಣ ಶ್ಲೋಕದಿಂದ ತಿಳಿದು ಬರುತ್ತದೆ.

## ಗಾಲವಮಹರ್ಷಿಗಳ ಅವತಾರ

ಇವರು ಗಾಲವಮಹರ್ಷಿಗಳ ಅವತಾರವೆಂದು ಸಂಪ್ರದಾಯಜ್ಞರ ನಂಬಿಕೆ. ಇದಕ್ಕೆ ಇಂಬು ನೀಡುವ ಕಥೆಯೊಂದು ಪ್ರಚಾರದಲ್ಲಿದೆ. ಒಮ್ಮೆ ಪಂಡಿತನೊಬ್ಬನಿಗೆ ಪರಿಹರಿಸಲಾಗದ ಅನೇಕ ಸಂಶಯಗಳು ತಲೆತಿನ್ನಲಾರಂಭಿಸಿದವಂತೆ. ಯಾರ ಬಳಿಯಲ್ಲಿಯೂ ಅದಕ್ಕೆ ಸೂಕ್ತ ಪರಿಹಾರ ದೊರಕಲಿಲ್ಲ. ಗಾಲವಮಹರ್ಷಿಗಳೊಬ್ಬರೆ ನಿನ್ನ ಎಲ್ಲ ಸಂಶಯಗಳಿಗೂ ಪರಿಹಾರ ನೀಡಬಲ್ಲರೆಂದು ಅವನಿಗೆ ಸೂಚನೆಯಾಯಿತಂತೆ. ಮರುದಿನವೇ ಜಗನ್ನಾಥಯತಿಗಳು ಆ ಗ್ರಾಮಕ್ಕೆ ದಯಮಾಡಿಸಿದರಂತೆ. ಆಗ ಕೂಡಲೇ ಆ ಪಂಡಿತ ತನ್ನ ಸಂಶಯಗಳನ್ನೆಲ್ಲಾ ಅವರ ಬಳಿಯಲ್ಲಿ ಹೇಳಿಕೊಂಡ. ಆಗ ಜಗನ್ನಾಥಯತಿಗಳು ಅವನ ಎಲ್ಲ ಸಂಶಯಗಳಿಗೆ ಮನಸ್ಸಿಗೊಪ್ಪುವಂತೆ ಸಮುಚಿತ ಸಮಂಜಸವಾದ ಸಮಾಧಾನಗಳನ್ನು ಥಟ್ಟನೆ ನೀಡಿದರಂತೆ. ಆಗ ಆ ಪಂಡಿತ ಅವರ ಪ್ರಖರಪಾಂಡಿತ್ಯ ಪ್ರತಿಭೆಗಳಿಗೆ ಮಾರುಹೋಗಿ '**ಗಾಲವಗುರುಭ್ಯೋನಮಃ**' ಎಂದು ಎದ್ದು ಸಾಷ್ಟಾಂಗ ಪ್ರಣಾಮ ಮಾಡಿದನಂತೆ.

ಹೀಗೆ ಮಹಾಮಹಿಮರಾದ ಶ್ರೀಜಗನ್ನಾಥಯತಿಗಳು ಪಾಠಪ್ರವಚನ, ಗ್ರಂಥರಚನೆ, ತತ್ತ್ವಪ್ರಸಾರದ ಮೂಲಕ, ತಮ್ಮ ಇಡೀ ಜೀವನವನ್ನು ಪಾವನಮಾಡಿಕೊಂಡರು. ಸಾರ್ಥಕ ಮಾಡಿಕೊಂಡರು.

## ಗ್ರಂಥರಚನೆ

ಜಗನ್ನಾಥಯತಿಗಳು ಮೂರು ಗ್ರಂಥಗಳನ್ನು ರಚಿಸಿರುವರೆಂದು ಪ್ರತೀತಿಯಿದೆ.

(1) ಭಾಷ್ಯದೀಪಿಕಾ
(2) ಸೂತ್ರದೀಪಿಕಾ
(3) ಋಗ್ಭಾಷ್ಯಟೀಕಾಟಿಪ್ಪಣೀ,

ಇವುಗಳಲ್ಲಿ ಎರಡು ಗ್ರಂಥಗಳು ಮುದ್ರಿತವಾಗಿವೆ. ಕೊನೆಯ ಗ್ರಂಥ ಇನ್ನೂ ಉಪಲಬ್ಧವಾಗಿಲ್ಲವೆಂದು ಡಾ॥ ಬಿ.ಎನ್.ಕೆ. ಶರ್ಮಾರವರು ಹೇಳುತ್ತಾರೆ.

## ಭಾಷ್ಯದೀಪಿಕಾ

ಉಪಲಬ್ಧವಾಗಿರುವ ಅವರು ಎರಡು ಗ್ರಂಥಗಳಲ್ಲಿ ಪಂಡಿತರಾದಿಯಾಗಿ ಎಲ್ಲರೂ ಮಾರುಹೋಗುವ ಮೇರುಕೃತಿ 'ಭಾಷ್ಯದೀಪಿಕಾ' . ಹೆಸರಿಗೆ ತಕ್ಕಂತೆ, ದೀಪದಂತೆ ಭಾಷ್ಯದ ವಿಷಯಗಳ ಬಗ್ಗೆ ಬೆಳಕು ಚೆಲ್ಲುವ ಅಪೂರ್ವ ಗ್ರಂಥರತ್ನ. ಭಾಷ್ಯದ ಆಶಯವನ್ನು ಕನ್ನಡಿಯಲ್ಲಿ ಪ್ರತಿಬಿಂಬದಷ್ಟು ಸುಸ್ಪಷ್ಟವಾಗಿ, 'ಇದಮಿತ್ಥಂ' ಎನ್ನುವಂತೆ ಸಂಶಯಕ್ಕೆಡೆಯಿಲ್ಲದಂತೆ ನಿರೂಪಿಸುವ ಗ್ರಂಥವಿದು. ಜಗನ್ನಾಥಯತಿಗಳ ಅಪ್ರತಿಮ ವೈದುಷ್ಯಕ್ಕೆ ಅವರ ಪ್ರಖರಪಾಂಡಿತ್ಯಕ್ಕೆ ಅಸದೃಶ ಪ್ರತಿಭೆಗೆ ಸಾಕ್ಷಿಯಾಗಿದೆ ಈ ಗ್ರಂಥ. 'ಬ್ರಹ್ಮಸೂತ್ರಗಣಭಾಷ್ಯಮದ್ಭುತಂ' 'ಭಾಷ್ಯಂ ಚಾತ್ಯರ್ಥವಿಸ್ತರಂ' ಎಂಬ ಪ್ರಾಚೀನರ ಮಾತು ಓದುಗರಿಗೆ ಈ ಕೃತಿಯಿಂದ ಮನದಟ್ಟಾಗುತ್ತದೆ. ಜಯತೀರ್ಥರ ಟೀಕಾ, ವಾದಿರಾಜರು, ರಘೂತ್ತಮರು, ರಾಘವೇಂದ್ರರು, ಮುಂತಾದ ಪ್ರಸಿದ್ಧ ಟಿಪ್ಪಣೀಕಾರರ, ಗ್ರಂಥಗಳನ್ನು ಉಲ್ಲೇಖಿಸಿ ಭಾಷ್ಯದ ಅಭಿಪ್ರಾಯವನ್ನು ಸ್ಫುಟಗೊಳಿಸುತ್ತಾರೆ. ತ್ರಿವಿಕ್ರಮ ಪಂಡಿತರ ತತ್ತ್ವಪ್ರದೀಪ, ಪದ್ಮನಾಭತೀರ್ಥರ ಸತ್ತರ್ಕದೀಪಾವಲೀ, ವ್ಯಾಸರಾಜರ ಚಂದ್ರಿಕಾಗ್ರಂಥದ ವಾಕ್ಯಗಳನ್ನು ಪ್ರಾಸಂಗಿಕವಾಗಿ ಅಲ್ಲಲ್ಲಿ ಉದಾಹರಿಸುತ್ತಾರೆ. ಸೂತ್ರಭಾಷ್ಯದ ವ್ಯಾಖ್ಯಾನವಾದ ತ್ರಿವಿಕ್ರಮಪಂಡಿತರ ತತ್ತ್ವಪ್ರದೀಪಕ್ಕೆ ಹಾಗೂ ಜಯತೀರ್ಥರ ತತ್ತ್ವಪ್ರಕಾಶಿಕಾಕ್ಕೆ ಬರುವ ವಿರೋಧಗಳನ್ನು ತಮ್ಮ ಅಪೂರ್ವವಿವರಣೆಯಿಂದ ಪರಿಹರಿಸುತ್ತಾರೆ.

ಆಚಾರ್ಯರ ಸಮಗ್ರ ಗ್ರಂಥಗಳೂ ಇವರಿಗೆ ಕರತಲಾಮಲಕವಾಗಿದ್ದವೆಂದು ಇವರ ವ್ಯಾಖ್ಯಾನವನ್ನು ನೋಡಿದವರಿಗೆ ವೇದ್ಯವಾಗುವದು. ಒಂದೇ ಶ್ರುತಿವಾಕ್ಯಕ್ಕೆ ಆಚಾರ್ಯರು ಗೀತಾಭಾಷ್ಯದಲ್ಲಿ, ಋಗ್ಭಾಷ್ಯದಲ್ಲಿ. ಉಪನಿಷದ್ ಭಾಷ್ಯದಲ್ಲಿ ನ್ಯಾಯವಿವರಣ, ಇತ್ಯಾದಿ ಬೇರೆ ಬೇರೆ ಗ್ರಂಥಗಳಲ್ಲಿ ಹೇಳಿರುವ ಭಿನ್ನಭಿನ್ನ ಅರ್ಥಗಳನ್ನು ಒಂದೇ ಕಡೆ ಕ್ರೋಡೀಕರಿಸಿ ನೀಡುತ್ತಾರೆ. ಇದರಿಂದ ಅವರಿಗಿರುವ ಅನೇಕ ಗ್ರಂಥಗಳ ಉಪಸ್ಥಿತಿ ಆಳವಾದ ಪಾಂಡಿತ್ಯ ದುರಾಗ್ರಹವರ್ಜಿತ ಚಿಕಿತ್ಸಕ ಬುದ್ಧಿ ಇವೆಲ್ಲವೂ ವೇದ್ಯವಾಗುತ್ತದೆ. ಭಾಷ್ಯದ , ಚ, ತು, ವೈ , ಹಿ , ಖಲು, ಅಪಿ, ಏವ ಮುಂತಾದ ಸಣ್ಣಪುಟ್ಟ ಶಬ್ದಗಳೂ ಬಹುಲಾರ್ಥಕ, ಸಾರ್ಥಕ, ಅನೇಕಾರ್ಥಸಾಧಕ, ವಿಶೇಷಾರ್ಥ ಸೂಚಕ, ಗೂಢಾಶಯಸ್ಫೋರಕ ಎಂಬುದು ಅವರ ವ್ಯಾಖ್ಯಾನದಿಂದ ಗೊತ್ತಾಗುತ್ತದೆ. ಪ್ರತಿಯೊಂದು ಅಧಿಕರಣದ ಪೂರ್ವಪಕ್ಷಸಿದ್ಧಾಂತಗಳನ್ನು ಭಾಷ್ಯದ ಆಶಯಕ್ಕೆ ಚ್ಯುತಿ ಬರದಂತೆ ಸ್ಪಷ್ಟಪಡಿಸುತ್ತಾ ಆಚಾರ್ಯರ ವಾಕ್ಯಕ್ಕೆ ಇತರ ಗ್ರಂಥಗಳಿಂದ ವಿರೋಧವನ್ನು

ಪರಿಹರಿಸುತ್ತಾರೆ . ಸಿದ್ಧಾಂತದ ಅಪೂರ್ವ ವಿಷಯಗಳ ಬಗ್ಗೆ ಅಲ್ಲಲ್ಲಿ ವಿಮರ್ಶೆ ನಡೆಸುತ್ತಾರೆ. ಅನೇಕ ಅಧಿಕರಣಗಳಲ್ಲಿ ಅವರು ಚರ್ಚಿಸಿರುವ ಅಪೂರ್ವ ವಿಷಯಗಳನ್ನು ಈ ಕೆಳಗಿನ ಉದಾಹರಣೆಗಳಿಂದ ತಿಳಿದು ಕೊಳ್ಳಬಹುದು.

## ತೇಜೋಧಿಕರಣ

*(ಅಧ್ಯಾಯ - 2, ಪಾದ - 3, ಸೂತ್ರ - 10.)*

ತೇಜೋಧಿಕರಣದಲ್ಲಿ, ತೇಜಸ್ಸಿಗೆ ಉತ್ಪತ್ತಿಯನ್ನು ಹೇಳುವ . **'ವಾಯೋರಗ್ನಿಃ'** **'ತತ್ತೇಜೋಽಸೃಜತ '** ಎಂಬ ಶ್ರುತಿಗಳಿಗೆ ಪರಸ್ಪರ ವಿರೋಧವನ್ನು ಪರಿಹರಿಸಲಾಗಿದೆ. ಇಲ್ಲಿ **'ವಾಯೋರಗ್ನಿಃ'** ಎಂಬ ಶ್ರುತಿಯಿರುವದರಿಂದ 'ತೇಜಸ್ಸು ವಾಯುವಿನಿಂದ ಹುಟ್ಟುತ್ತದೆ ಎಂದು ಪೂರ್ವಪಕ್ಷಮಾಡಿಕೊಂಡು **'ತತ್ತೇಜೋಽಸೃಜತ '** ಎಂಬ ಶ್ರುತಿಯ ಆಧಾರದಿಂದ ತೇಜಸ್ಸು ಪರಮಾತ್ಮನಿಂದಲೇ ಹುಟ್ಟುವದು ಎಂದು ಸಿದ್ಧಾಂತಿಸಲಾಗಿದೆ. **'ವಾಯೋರಗ್ನಿಃ'** ಎಂಬ ಶ್ರುತಿಗೆ ವಾಯುದ್ವಾರಾ ಭಗವಂತನಿಂದ ತೇಜಸ್ಸು ಜನಿಸಿತು ಎಂಬ ಅರ್ಥವು ಅಭಿಪ್ರೇತವಾಗಿರುವದರಿಂದ ಯಾವುದೇ ವಿರೋಧವಿಲ್ಲ.

**'ತತ್ತೇಜೋಽಸೃಜತ '** ಎಂಬ ಛಾಂದೋಗ್ಯಶ್ರುತಿಗೆ **ತತ್** = ತತ್‌ಶಬ್ದವಾಚ್ಯನಾದ ಭಗವಂತನು **ತೇಜಃ** = ತೇಜೋಭೂತವನ್ನು, **ಅಸೃಜತ** = ವಾಯುದ್ವಾರಾ ಸೃಜಿಸಿದನು ಎಂದರ್ಥ. ಇದರ ಮೇಲೆ ಬರುವ ಪ್ರಶ್ನೆ.

**'ಸೋಽಸೃಜತ್ ಪ್ರಥಮಂ ದೇವೀಂ ತೇಜ ಆಖ್ಯಾಂ ಶ್ರಿಯಂ ಸತೀಮ್ ।**
**ತತೇ ಸ್ಥಿತೇನ ರೂಪೇಣ ಸಾಽಜೈವ ಯತಸ್ಸದಾ ।**
**ತೇಜ ಇತ್ಯುಚ್ಯತೆ ತಸ್ಮಾತ್ ಜನೇರ್ವಾ ತತ ಏವ ತು ॥'**

ಎಂದು ಛಾಂದೋಗ್ಯಬಾಷ್ಯದಲ್ಲಿ 'ತೇಜಃ ಶಬ್ದವು ಶ್ರೀದೇವಿಪರ ' ಎಂದು ಹೇಳಿರುವದರಿಂದ ಹಾಗೇ **'ಪ್ರಾಥಮ್ಯಾಚ್ಚ ತೇಜ ಆದ್ಯಾ ಲಕ್ಷ್ಮ್ಯುದಯ ಇತಿ ಸಿದ್ಧಮ್'** ಎಂದು ಛಾಂದೋಗ್ಯ ಭಾಷ್ಯದ ಮತ್ತೊಂದು ವಾಕ್ಯದಿಂದಲೂ ತೇಜಃ ಶಬ್ದವು ಶ್ರೀದೇವಿಪರ ಎಂದು ತಿಳಿದು ಬರುವದು. ಇಲ್ಲಿ (ಶ್ರುತಿ ಸೂತ್ರಗಳಲ್ಲಿ) ತೇಜಃ ಶಬ್ದಕ್ಕೆ ತೇಜೋಭೂತವೆಂದು ಅರ್ಥ ಮಾಡಿದರೆ . ಯದ್ಯಪಿ ಛಾಂದೋಗ್ಯಭಾಷ್ಯದ ವಿರೋಧವು ಬರುವದು. ಹಾಗಿದ್ದರೂ ಇಲ್ಲಿ ತೇಜಃ ಶಬ್ದದಿಂದ ತೇಜೋದೇವತೆಯಾದ ಶ್ರೀದೇವಿ, ಹಾಗೂ ಅವಳಿಂದ ಅಭಿಮನ್ಯವಾದ ತೇಜೋಭೂತ ಎರಡೂ ವಿವಕ್ಷಿತವಾದ್ದರಿಂದ ಛಾಂದೋಗ್ಯ ಭಾಷ್ಯದ ವಿರೋಧವಿಲ್ಲ.

ಇದರ ಮೇಲೆ ಬರುವ ಪ್ರಶ್ನೆ. ಇಲ್ಲಿ **'ವಾಯೋರಗ್ನಿಃ'** ಎಂಬ ಶ್ರುತಿವಿರೋಧವನ್ನು 'ತೇಜಸ್ಸು ವಾಯುದ್ವಾರಾ ಬ್ರಹ್ಮನಿಂದ ಜನಿಸಿತು' ಎಂಬ ಅಭಿಪ್ರಾಯವಿಟ್ಟುಕೊಂಡು ಪರಿಹರಿಸಲಾಗಿದೆ. ಇಲ್ಲಿ ತೇಜಃ ಶಬ್ದದಿಂದ ತೇಜೋಭೂತದ ಜೊತೆಗೆ ಲಕ್ಷ್ಮೀದೇವಿಯನ್ನೂ ಇಟ್ಟುಕೊಂಡರೆ, ವಾಯುದ್ವಾರಾ ಬ್ರಹ್ಮಜಾತತ್ವವನ್ನು ಲಕ್ಷ್ಮೀದೇವಿಗೆ ಕೂಡಿಸುವದು ಹೇಗೆ? ಎಂಬ ಪ್ರಶ್ನೆ ಬರಬಹುದು. ಆದರೆ ಬ್ರಹ್ಮಜಾತತ್ವ (ಪರಬ್ರಹ್ಮನಿಂದ ಜನಿಸುವಿಕೆ) ತೇಜೋಭೂತ ಹಾಗೂ ಲಕ್ಷ್ಮೀದೇವಿ ಇವೆರಡರಲ್ಲಿ ಸಾಧಾರಣವಾಗಿ ಹೇಳಲ್ಪಟ್ಟಿದ್ದರೂ, ವಾಯುಜಾತತ್ವವನ್ನು ಕೇವಲ ಭೂತವಿವಕ್ಷೆಯಿಂದ ಹೇಳಲಾಗಿದೆ.

ಇದರ ಮೇಲೆ ಬರುವ ಪ್ರಶ್ನೆ. ಇಲ್ಲಿ ಭೂತವಿವಕ್ಷೆ ಇರುವಾಗ ತೇಜಸ್ಸಿಗೆ ಪ್ರಾಥಮ್ಯ ಹೇಗೆ? **'ಆತ್ಮನ ಆಕಾಶಃ ಸಂಭೂತಃ'** ಎಂಬ ಶ್ರುತಿಯ ಅನುಸಾರ ಪಂಚಭೂತಗಳಲ್ಲಿ ಆಕಾಶಕ್ಕೇ ತಾನೇ ಪ್ರಾಥಮ್ಯವಿರುವದು. ಹಾಗಿದ್ದರೂ ಆಕಾಶವಾಯುಗಳು ಅಪ್ರತ್ಯಕ್ಷವಾಗಿರುವದರಿಂದ ಪ್ರತ್ಯಕ್ಷವಾದ ಭೂತಗಳ ಪೈಕಿ ತೇಜಸ್ಸಿಗೆ ಪ್ರಾಥಮ್ಯವನ್ನು ಅಂಗೀಕರಿಸಲು ಯಾವುದೇ ತೊಂದರೆ ಇಲ್ಲ. ಸೃಷ್ಟಿಭೇದದಿಂದಲೂ ಈ ಎರಡು ಶ್ರುತಿವಾಕ್ಯಗಳಿಗೆ ವಿರೋಧವನ್ನು ಪರಿಹರಿಸಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ.

## ಅಣ್ವಧಿಕರಣ

*(ಅಧ್ಯಾಯ -2, ಪಾದ - 4, ಸೂತ್ರ - 14)*

ಅಣ್ವಧಿಕರಣದಲ್ಲಿ, **'ಪ್ರಾಣ ಏವಾಧಸ್ತಾತ್'** ಎಂದು ಮುಖ್ಯಪ್ರಾಣನಿಗೆ ವ್ಯಾಪ್ತಿಯನ್ನು ನಿರೂಪಿಸುವ ಶ್ರುತಿಗೂ **'ಅಣುರ್ನ್ಯೆತತ್ ಪೂಜ್ಯತೇ'** ಎಂದು ಅಣುತ್ವವನ್ನು ನಿರೂಪಿಸುವ ಶ್ರುತಿಗೂ ವಿರೋಧ ಪರಿಹರಿಸಲಾಗಿದೆ. ವ್ಯಾಪ್ತಿಶ್ರುತಿಯ ವಿರೋಧವಿರುವದರಿಂದ ಮುಖ್ಯಪ್ರಾಣನು ಅಣುವಲ್ಲ ಎಂದು ಪೂರ್ವಪಕ್ಷ ಮಾಡಿಕೊಂಡು, **'ಸ ವಾ ಏಷ ಪ್ರಾಣೋಽಣುರ್ಮಹಾನ್ ನಾಮಾಂತರ್ವಾ ಅಣುರ್ಬಹಿರ್ಮಹಾನ್'** ಎಂಬ ಕೌಂಡಿನ್ಯ ಶ್ರುತಿಯ ಆಧಾರದಿಂದ ಮುಖ್ಯಪ್ರಾಣನಿಗೆ ಅಣುತ್ವವನ್ನು ಸಮರ್ಥಿಸಿದ್ದಾರೆ. ಶರೀರದ ಹೊರಗೆ ವ್ಯಾಪ್ತನಾಗಿದ್ದರೂ ಶರೀರದೊಳಗೆ ಅಣುತ್ವವಿರುವದರಿಂದ ಯಾವುದೇ ವಿರೋಧವಿಲ್ಲ.

ಈ ಅಧಿಕರಣದಲ್ಲಿ **'ಪ್ರಾಣ ಏವಾಧಸ್ತಾತ್'** ಎಂಬ ಶ್ರುತಿಯಿಂದ ಪ್ರಾಣನಿಗೆ ವ್ಯಾಪ್ತಿಯು ತೋರುವುದರಿಂದ ಪ್ರಾಣನು ವ್ಯಾಪ್ತ, ಅಣುವಲ್ಲ ಎಂಬುದಾಗಿ ಪೂರ್ವಪಕ್ಷ. ಪ್ರಾಣನು ಅಣು ಎಂಬುವ ವಿಷಯದಲ್ಲೂ ಶ್ರುತಿ ಇರುವುದರಿಂದ ಅದರ ವಿರೋಧ ಇದಕ್ಕೆ ಎಂದಾಶಂಕಿಸುವಂತಿಲ್ಲ. ಏಕೆಂದರೆ ವ್ಯಾಪ್ತಿ ಶ್ರುತಿಯು

**'ಯತಃ ಸರ್ವಂ ಜಗದ್ವ್ಯಾಪ್ಯ ತಿಷ್ಠತಿ ಪ್ರಾಣ ಏವ ತು ।**
**ಅತೋ ಧೃತಂ ಜಗತ್ಸರ್ವಂ ಅನ್ಯಥಾ ಕೇನ ಧಾರ್ಯತೇ ॥'**

ಎಂಬ 'ವಾಯುಪ್ರೋಕ್ತ'ದಲ್ಲಿ ಹೇಳಲಾದ ಜಗದ್ಧಾರಕತ್ವಯುಕ್ತಿಯಿಂದ ಕೂಡಿರುವದರಿಂದ ಪ್ರಬಲವಾಗಿದೆ. ಈ ಸಂದರ್ಭದಲ್ಲಿ ಭಾಷ್ಯದಲ್ಲಿ '**ಇತಿ ಚ ಯುಕ್ತಿಃ ವಾಯುಪ್ರೋಕ್ತೇ**' ಎಂದು ಹೇಳಲಾಗಿದೆ. ಇದರ ಅಭಿಪ್ರಾಯವನ್ನು ಭಾಷ್ಯದೀಪಿಕಾಕಾರರು ಸೊಗಸಾಗಿ ವಿವರಿಸಿದ್ದಾರೆ. ಅದು ಹೀಗಿದೆ. '**ಇತಿ ಚ ಯುಕ್ತಿಃ ವಾಯುಪ್ರೋಕ್ತೇ**' ಎಂಬಲ್ಲಿ ಚಶಬ್ದಕ್ಕೆ ಮುಖ್ಯ ಪ್ರಾಣನ ವ್ಯಾಪ್ತಿಯವಿಷಯದಲ್ಲಿ ಬರೀ ಶ್ರುತಿಯಿರುವದು ಮಾತ್ರವಲ್ಲ ಮತ್ತೇನೆಂದರೆ ಯುಕ್ತಿಯೂ ಇದೆ ಎಂದರ್ಥ. ಅಥವಾ '**ವಾಯುಪ್ರೋಕ್ತೇ ಚ**' ಎಂಬುದಾಗಿಯೂ ಚಶಬ್ದವನ್ನು ಅನ್ವಯಿಸಿಕೊಳ್ಳಬಹುದು. ಆಗ ಜಗದ್ಧಾರಕತ್ವಯುಕ್ತಿಯು ವಾಯುಪ್ರೋಕ್ತ ಗ್ರಂಥದಲ್ಲಿ ಮಾತ್ರ ಹೇಳಲಾಗಿರುವುದಲ್ಲ, ಮತ್ತೇನೆಂದರೆ

**'ಸಪ್ತಸ್ಕಂಧಗತೋ ಲೋಕಾನ್ ಯೋ ಬಿಭರ್ತಿ ಮಹಾಬಲಃ '**

ಎಂದು ಹರಿವಂಶದಲ್ಲಿಯೂ ಹೇಳಲ್ಪಟ್ಟಿದೆ ಎಂದು ಸಮುಚ್ಚಯಾರ್ಥಕವಾಗಿದೆ. ಹೀಗೆ ವ್ಯಾಪ್ತಿಶ್ರುತಿಯು ಯುಕ್ತಿಯುಕ್ತವಾಗಿರುವುದರಿಂದ ಬಲಿಷ್ಠವಾಗಿದೆ. ಆದ್ದರಿಂದ ಇದಕ್ಕೆ ಅಣುತ್ವಶ್ರುತಿವಿರೋಧವನ್ನು ಶಂಕಿಸುವಂತಿಲ್ಲ.

ದಿತಿಯ ಗರ್ಭದಲ್ಲಿ ಪ್ರವಿಷ್ಟರಾದ 49 ಮರುತ್ತುಗಳ ಮೇಲೆ ಇಂದ್ರದೇವರು ವಜ್ರಾಯುಧ ಪ್ರಯೋಗಿಸಿದಾಗ ಏಳು ಶಾಖೆಗಳಾಯಿತು. (ತುಂಡುಗಳಾಯಿತು). ಪುನಃ ವಜ್ರಾಯುಧ ಪ್ರಯೋಗಿಸಿ ಒಂದೊಂದು ತುಂಡನ್ನೂ ಏಳು ತುಂಡುಗಳನ್ನಾಗಿಸಿದರು. ಅಂದಿನಿಂದ ಮರುತ್ತುಗಳಿಗೆ 'ಸಪ್ತ ಸ್ಕಂಧ' ಎಂಬ ಹೆಸರುಂಟಾಯಿತು . ಇಂತಹ ಮರುತ್ತುಗಳಿಗೆ ನಿಯಾಮಕನಾಗಿರುವ ಮುಖ್ಯಪ್ರಾಣನು ಲೋಕಗಳನ್ನು ಭರಿಸುತ್ತಾನೆ ಎಂದು ಹರಿವಂಶವಚನದ ಅರ್ಥ. ಈ ವಿಷಯದಲ್ಲಿ

**'ಸಪ್ತಸ್ಕಂಧಾ ಇಮೇ ಸಪ್ತ ಚರಂತು ಮಮ ಪುತ್ರಕಾಃ'**

ಎಂಬ ದಿತಿಯ ವಚನ '**ಸಪ್ತಗಣಾ ವೈ ಮರುತಃ**' ಎಂಬ ಶ್ರುತಿವಾಕ್ಯ '**ಸಪ್ತಸಪ್ತಕಾ ಹಿ ತೇ**' ಎಂಬ ಋಗ್ಭಾಷ್ಯಟೀಕಾವಚನವೂ ಆಧಾರವಾಗಿವೆ.

'**ಸಪ್ತಸ್ಕಂಧಗತೋ ಲೋಕಾನ್** ' ಎಂಬುದಕ್ಕೆ ತನ್ನ ಸ್ಕಂಧದಿಂದ(ಹೆಗಲಿನಿಂದ) ಏಳು ಲೋಕಗಳನ್ನು ಧರಿಸುತ್ತಾನೆ ಎಂದು ಕೆಲವರು ಅರ್ಥೈಸುತ್ತಾರೆ . ಆದರೆ ಇದು ಸರಿಯಾಗಲಾರದು. ಏಕೆಂದರೆ ಆವರಿಗೆ

**'ಸಪ್ತಸ್ಕಂಧಗತೋ ಲೋಕಾನ್ ತ್ರೀನ್ ದಧಾರ ಚಚಾರ ಹ '**

ಎಂಬ ಪಾಠಾಂತರದ ವಿರೋಧ ಬರುವುದು. ಇಲ್ಲಿ '**ತ್ರೀನ್ ಲೋಕಾನ್** ' ಮೂರು ಲೋಕಗಳನ್ನು ಎಂದು ಹೇಳಿರುವದರಿಂದ ವಿರೋಧ ಸ್ಪಷ್ಟ. ಇನ್ನು ಕೆಲವರು ನಲ್ವತ್ತೊಂಭತ್ತು ಮರುತ್ತುಗಳಲ್ಲಿ ಪ್ರಧಾನರಾದ ಏಳು ಮರುತ್ತುಗಳ ಸ್ಕಂಧದಲ್ಲಿದ್ದು ಮುಖ್ಯಪ್ರಾಣನು ಲೋಕಗಳನ್ನು ಧರಿಸುತ್ತಾನೆ ಎಂದು ವ್ಯಾಖ್ಯಾನಿಸುತ್ತಾರೆ . ಇದು ಹಿಂದೆ ಹೇಳಿದ ಪ್ರಮಾಣಗಳಿಗೆ ವಿರುದ್ಧವಾಗಿರುವದರಿಂದ ಅನಾದರಣೀಯವಾಗಿದೆ. ಮತ್ತೆ ಕೆಲವರು 'ಮಹತ್ತತ್ತ್ವ ಅಹಂಕಾರತತ್ತ್ವ ಪಂಚಭೂತಗಳೆಂಬ ಸಪ್ತಸ್ಕಂಧದಲ್ಲಿದ್ದು-ಕೊಂಡು' ಎಂದು ವ್ಯಾಖ್ಯಾನಿಸುವರು . ಅದೂ ಹಿಂದೆ ಹೇಳಿದ ಪ್ರಮಾಣಗಳಿಗೆ ವಿರುದ್ಧವಾದ್ದರಿಂದ ಸ್ವೀಕಾರಾರ್ಹವಲ್ಲ.

## ಪಾಠಾಂತರಗಳ ಉಲ್ಲೇಖ

ಭಾಷ್ಯದೀಪಿಕಾಕಾರರು ಅಲ್ಲಲ್ಲಿ ಭಾಷ್ಯದ ಪಾಠಾಂತರಗಳನ್ನು ಉಲ್ಲೇಖಿಸಿ ಅದಕ್ಕೂ ವ್ಯಾಖ್ಯಾನ ಮಾಡುವದಿದೆ. ಉದಾಹರಣೆಗೆ–'ಸರ್ವಧರ್ಮೋಪಪತ್ತ್ಯಧಿಕರಣ' *(ಅಧ್ಯಾಯ -2, ಪಾದ -1, ಸೂತ್ರ - 38)*ವನ್ನು ಗಮನಿಸಬಹುದು. ಇಲ್ಲಿ ,

**'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ**
**ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ ।**
**ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ**
**ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ ॥**

***ಇತಿ ಸರ್ವಧರ್ಮೋಪಪತ್ತೇರಿತಿ'***

ಎಂಬುದಾಗಿ ಭಾಷ್ಯವಾಕ್ಯ. ಇದಕ್ಕೆ ವ್ಯಾಖ್ಯಾನ ಮಾಡುತ್ತಾ ಭಾಷ್ಯದೀಪಿಕಾಕಾರು '**ಸರ್ವಧರ್ಮೋಪಪತ್ತೇಃ**' ಭಗವಂತನಲ್ಲಿ 'ಶ್ರುತವಾದ ಅಶ್ರುತವಾದ ಚಿಂತ್ಯವಾದ ಅಚಿಂತ್ಯವಾದ ಸುವಿರುದ್ಧವಾದ 'ಸರ್ವಧರ್ಮಗಳು ಭಗವಂತನಲ್ಲಿ ಇವೆ ಎಂದು ಪ್ರತಿಪಾದಿಸುವ ಶ್ರುತಿ ಇರುವದರಿಂದ, ಸಾಮಾನ್ಯಚೇತನನಂತೆ ಭಗವಂತನೂ ಚೇತನನಾಗಿರುವದರಿಂದ ಗುಣಪೂರ್ಣನಲ್ಲ ಎಂದು ಆಕ್ಷೇಪಿಸುವಂತಿಲ್ಲ. ಕೆಲವೆಡೆ '**ಸರ್ವಗುಣೋಪಪತ್ತಿಶ್ರುತೇಶ್ಚ**' ಎಂಬುದಾಗಿ ಭಾಷ್ಯಪಾಠ ಕಂಡುಬರುವದು. ಆ ಪಾಠದಲ್ಲಿ '**ಗುಣ**' ಎಂಬುದು ಸೂತ್ರದಲ್ಲಿರುವ '**ಧರ್ಮ**' ಶಬ್ದದ ವ್ಯಾಖ್ಯಾನವೆಂದು ತಿಳಿಯಬೇಕು. '**ಚ** ' ಶಬ್ದವು ಸಮುಚ್ಚಯಾರ್ಥಕ. ಕೇವಲ ಸ್ವಾತಂತ್ರ್ಯಾದಿಗಳಿಂದ

ವಿಷ್ಣುವಿನಲ್ಲಿ ಸರ್ವಧರ್ಮಗಳು ಉಪಪನ್ನವಾಗುವದಲ್ಲ ಮತ್ತೇನೆಂದರೆ '**ಗುಣಾಃ ಶ್ರುತಾಃ**' ಎಂಬ ಸರ್ವಧರ್ಮೋಪಪಾದಕ ಶ್ರುತಿಯಿರುವದರಿಂದಲೂ ಎಂದರ್ಥ.

ಈ ಸಂದರ್ಭದಲ್ಲಿ ಭಾಷ್ಯದೀಪಿಕಾಕಾರರು ಪ್ರಾಸಂಗಿಕವಾಗಿ ಇನ್ನೊಂದು ವಿಷಯವನ್ನರುಹುತ್ತಾರೆ. '**ಗುಣಾಃ ಶ್ರುತಾಃ**' ಎಂಬೀ ಶ್ರುತಿಯು ಆಚಾರ್ಯರ ಗೀತಾತಾತ್ಪರ್ಯದ ಪ್ರಕಾರ ಋಗ್ವೇದದಲ್ಲಿರುವ ಸೌಪರ್ಣಶಾಖೆಗೆ ಸಂಬಂಧಿಸಿದ ಶ್ರುತಿ . ಗೀತಾಭಾಷ್ಯದ ಪ್ರಕಾರ ಜಾಬಾಲಿಖಿಲಶ್ರುತಿ. ಹಾಗಿದ್ದರೂ ವಿರೋಧವೇನೂ ಇಲ್ಲ. ಏಕೆಂದರೆ ಸುಪರ್ಣನು ಕಂಡುಕೊಂಡಿರುವ ಶ್ರುತಿಯೇ ಕಾಲಾಂತರದಲ್ಲಿ ಜಾಬಾಲಿಮಹರ್ಷಿಗಳಿಗೆ ಭಾಸವಾಗಿರಬಹುದು.

ಇದೇ ರೀತಿ '**ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ**' (2-1-3) ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಆಚಾರ್ಯರು '**ಶಿಷ್ಟಾ ಅಪರಿಗ್ರಹಾ ಅಪಿ**' ಎಂಬುದಕ್ಕೆ '**ಅವಶಿಷ್ಟಾ ಅಪ್ಯಪರಿಗ್ರಹಾ ವಿರುದ್ಧಸಿದ್ಧಾಂತಾಃ**' ಎಂದು ವ್ಯಾಖ್ಯಾನಮಾಡಿದ್ದಾರೆ. ಇಲ್ಲಿ ಸೂತ್ರಕ್ಕೆ ಅನುಗುಣವಾಗಿ '**ಅವಶಿಷ್ಟಾ ಅಪರಿಗ್ರಹಾ ಅಪಿ**' ಎಂಬುದಾಗಿ ವ್ಯಾಖ್ಯಾನ ಮಾಡಬೇಕಾಗಿತ್ತು. ಅದನ್ನು ಬಿಟ್ಟು '**ಅವಶಿಷ್ಟಾ ಅಪಿ**' ಎಂದು ಭಿನ್ನಕ್ರಮೇಣ **ಅಪಿ**ಶಬ್ದವನ್ನು ಸಂಯೋಜಿಸಿ ವ್ಯಾಖ್ಯಾನಮಾಡಿರುವದಕ್ಕೆ ಕಾರಣವನ್ನು ಭಾಷ್ಯದೀಪಿಕಾಕಾರರು ತಿಳಿಸುತ್ತಾರೆ. ಪರಕೀಯರು ಈ ಸೂತ್ರದಲ್ಲಿ '**ಶಿಷ್ಟಾಪರಿಗ್ರಹಾಃ**' ಎಂಬುದು ಒಂದೇ ಪದ ಎಂದು ಪರಿಗಣಿಸುತ್ತಾರೆ. ಆದ್ದರಿಂದ ಒಂದೇ ಪದ ಎಂಬ ಭ್ರಮೆಯನ್ನು ನಿವಾರಿಸಲು '**ಅವಶಿಷ್ಟಾ ಅಪಿ**' ಎಂದು ಆಚಾರ್ಯರು ವ್ಯಾಖ್ಯಾನಿಸಿದ್ದಾರೆ .

ಅಥವಾ ಬಹಳಷ್ಟು ಹಸ್ತಪ್ರತಿಗಳಲ್ಲಿ '**ಶಿಷ್ಟಾಪರಿಗ್ರಹಾಃ**' ಎಂಬ ಸಮಾಸಪಾಠ (ಸಮಸ್ತವಾದ ಒಂದೇ ಪದ)ವೇ ಕಂಡುಬಂದಿರುವದರಿಂದ '**ಶಿಷ್ಟಾಪರಿಗ್ರಹಾಃ**' ಎಂಬುದು ಒಂದೇ ಪದವೆಂದು ಇಟ್ಟುಕೊಂಡರೂ ಅಡ್ಡಿ ಇಲ್ಲ. ಆಗ ಪರರು ಮಾಡುವಂತೆ ತತ್ಪುರುಷಸಮಾಸಮಾಡದೇ '**ಶಿಷ್ಟಾಶ್ಚ ತೇ ಅಪರಿಗ್ರಹಾಶ್ಚ**' ಎಂಬುದಾಗಿ ಕರ್ಮಧಾರಯ ಸಮಾಸ ಮಾಡಬೇಕು. ಏಕೆಂದರೆ ಕರ್ಮಧಾರಯಸಮಾಸದಲ್ಲಿ ವಿಶೇಷಣ ವಿಶೇಷ್ಯರೂಪ ಉಭಯಪದಾರ್ಥಕ್ಕೆ ಪ್ರಾಧಾನ್ಯವಿದೆ . ಆದ್ದರಿಂದ ಅದು ಉತ್ತರಪದಾರ್ಥಕ್ಕೆ ಮಾತ್ರ ಪ್ರಾಧಾನ್ಯವಿರುವ ತತ್ಪುರುಷಕ್ಕಿಂತ ಪ್ರಬಲ. '**राज्ञः पुरुषः**' ಎಂಬ ತತ್ಪುರುಷದಲ್ಲಿ ಪೂರ್ವಪದಕ್ಕೆ ರಾಜಸಂಬಂಧಿಯಲ್ಲಿ ಲಕ್ಷಣಾ, ಆದರೆ ಕರ್ಮಧಾರಯದಲ್ಲಿ ಉಭಯಪದಗಳಿಗೂ ಮುಖ್ಯಾರ್ಥವನ್ನೇ ಸ್ವೀಕರಿಸುವದರಿಂದ ಅದು ತತ್ಪುರುಷಕ್ಕಿಂತ ಪ್ರಬಲವೆನಿಸಿದೆ.

ಇದೇ ರೀತಿ **'स्वपक्षदोषाच्च'** (2-1-30) ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ

**'ये दोषा इतरत्रापि ते गुणाः परमे मताः ।**
**न दोषः परमे कश्चिद् गुणा एव निरन्तराः ॥ '**
**इति वचनात् जीवपक्ष एव दोषो न परपक्षे'**

ಎಂದು ವ್ಯಾಖ್ಯಾನಿಸಿದ್ದಾರೆ. ಈ ಸಂದರ್ಭದಲ್ಲಿ **'ये दोषाः'** ಎಂಬ ಪ್ರಮಾಣವಚವು ಶ್ರುತಿಯೋ ಅಥವಾ ಸ್ಮೃತಿಯೋ? ಎಂಬುದು ಗೊತ್ತಾಗುವದಿಲ್ಲ. ಭಾಷ್ಯದೀಪಿಕಾಕಾರರು ಇದಕ್ಕೆ ಉತ್ತರಿಸುತ್ತಾ ಇದನ್ನು ಕೆಲವರು ಶ್ರುತಿಯನ್ನುತ್ತಾರೆ, ಕೆಲವರು ಸ್ಮೃತಿ ಎಂದು ಅಭಿಪ್ರಾಯಪಡುತ್ತಾರೆ. ಆದ್ದರಿಂದಲೇ ಭಾಷ್ಯಟೀಕಾಗಳಲ್ಲಿ 'ವಚನ' ಶಬ್ದವನ್ನು ಪ್ರಯೋಗಿಸಲಾಗಿದೆ ಎಂದಿದ್ದಾರೆ.

## ನಪ್ರಯೋಜನಾಧಿಕರಣ

*(ಅಧ್ಯಾಯ-2, ಪಾದ-2, ಸೂತ್ರ-33)*

ಇದೇ ರೀತಿ '**ನ ಪ್ರಯೋಜನಾಧಿಕರಣ**'ದಲ್ಲಿ '**ಅಥೈಷ ಏವ ಪರಮಾನಂದಃ**' ಎಂಬ ಶ್ರುತಿಗೆ ವ್ಯಾಖ್ಯಾನ ಮಾಡುವಾಗ, **ಏಷ ಏವ** = ಈ ಭಗವಂತನೇ ಪರಮಾನಂದಃ = ಪೂರ್ಣಾನಂದನು ಎಂದು ವ್ಯಾಖ್ಯಾನ ಮಾಡಿ '**ಪರಮ ಆನಂದಃ**' ಎಂಬ ಭಿನ್ನಪದದ ಪಾಠಾಂತರದಲ್ಲಿಯೂ ಶ್ರುತಿಗೆ ಇದೇ ಅರ್ಥ ಮಾಡಬೇಕು ಎಂದು ತಿಳಿಸುತ್ತಾರೆ.

ಹೀಗೆಯೇ 'ಪುರುಷಾಶ್ಮಾಧಿಕರಣದಲ್ಲಿ' '**ಪುರುಷಾಶ್ಮವದಿತಿ ಚೇತ್ ತಥಾऽಪಿ**' (2-2-7) ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ '**ತತ್ರಾಪಿ**' ಎಂಬ ಪಾಠಾಂತರವನ್ನುಲ್ಲೇಖಿಸಿ '**ತತ್ರಾಪೀತಿ ಸೂತ್ರಪಾಠೇऽಪ್ಯಯಮೇವಾರ್ಥೋ ಬೋದ್ಧವ್ಯಃ**' ಎಂದು ವ್ಯಾಖ್ಯಾನ ಮಾಡಿದ್ದಾರೆ.

## 'ಆನಂದೀ ಭವತಿ' ಎಂಬುದು ಸಮಸ್ತಪದವೇ ಹೊರತು ಭಿನ್ನಪದವಲ್ಲ.

ಇದೇರೀತಿ, ಎರಡನೇ ಅಧ್ಯಾಯದ ಮೂರನೇ ಪಾದದಲ್ಲಿ ಬರುವ ಅಧಿಕರಣ **ಪುಂಸ್ತ್ವಾಧಿಕರಣ** (2-3-31). ಇಲ್ಲಿ ಜೀವನಿಗೆ ಆನಂದಾದಿರೂಪತ್ವ ಮತ್ತು ತದಭಾವ (ಆನಂದರೂಪತ್ವಾಭಾವ) ವನ್ನು ವರ್ಣಿಸುವ ಶ್ರುತಿಗಳಿಗೆ ವಿರೋಧವನ್ನು ಪರಿಹರಿಸಿದ್ದಾರೆ. '**ಸ ಆನಂದಃ ಸ ಬಲಃ ಸ ಓಜಃ ಸ ಪರೇಣಾಮುಂ ಲೋಕಂ ನೀಯತೆ ಸ ವಿಮುಚ್ಯತೆ**' ಎಂಬ ಶ್ರುತಿ ಜೀವನಿಗೆ ಆನಂದಾದಿರೂಪತ್ವವನ್ನು ತಿಳಿಸುತ್ತಿದೆ. '**ಸ ದುಃಖಾದ್ ವಿಮುಕ್ತ ಆನಂದೀಭವತಿ ಸೋऽಜ್ಞಾನಾದ್ ವಿಮುಕ್ತೋ**

**ಜ್ಞಾನೀಭವತಿ ಸೋಽಬಲಾದ್ ವಿಮುಕ್ತೋ ಬಲೀಭವತಿ . ಸ ನಿತ್ಯೋ ನಿರಾತಂಕೋಽವತಿಷ್ಠತೆ** ' ಎಂಬ ಪೈಂಗಿ ಶ್ರುತಿ ತದಭಾವ (ಆನಂದರೂಪತ್ವಾಭಾವ) ವನ್ನು ತಿಳಿಸುತ್ತದೆ. ಈ ಶ್ರುತಿಗೆ ಅರ್ಥವನ್ನು ವಿವರಿಸುವಾಗ ಭಾಷ್ಯದೀಪಿಕಾಕಾರರು ಕೆಲವರು ಇಲ್ಲಿ **ಆನಂದೀಭವತಿ ಜ್ಞಾನೀಭವತಿ** ಎಂಬುದಕ್ಕೆ **ಆನಂದೀ ಪರಮಾನಂದವಾನ್ ಭವತಿ, ಜ್ಞಾನೀ ಜ್ಞಾನವಾನ್ ಭವತಿ** ಎಂಬುದಾಗಿ, ಇನಿಪ್ರತ್ಯಯಾಂತವಾದ ಭಿನ್ನಪದವೆಂದು ಪರಿಗಣಿಸಿ ವ್ಯಾಖ್ಯಾನಿಸುತ್ತಾರೆ. ಇದು ಸುಧಾವಿರುದ್ಧ. ಏಕೆಂದರೆ '**ಆನಂದೀಭವತಿ ಸ್ಫುಟಮ್** ' ಎಂಬ ಅನುವ್ಯಾಖ್ಯಾನದ ಭಾಗಕ್ಕೆ ವ್ಯಾಖ್ಯಾನಮಾಡುವಾಗ ಟೀಕಾಕೃತ್ಪಾದರು '**ಆನಂದಸ್ಯ ಸ್ವಭಾವಸಿದ್ಧತ್ವಾದ್ ಭವತೀತಿ ಕಥಂ** ? (ಆನಂದವು ಜೀವನಿಗೆ ಸ್ವಾಭಾವಿಕವಾಗಿ ಸಿದ್ಧವಾದ್ದರಿಂದ **ಭವತಿ** = ಉಂಟಾಗುತ್ತದೆ ಎಂದು ಹೇಳಿದ್ದು ಹೇಗೆ ? ಎಂಬ ಪ್ರಶ್ನೆಗೆ '**ಸ್ಫುಟಂ**' ಎಂದು ಅನುವ್ಯಾಖ್ಯಾನದಲ್ಲಿ ಉತ್ತರಿಸಲಾಗಿದೆ ಎಂದಿದ್ದಾರೆ. ಜೀವನಲ್ಲಿ ಸಹಜವಾಗಿ ಇರುವ ಆನಂದವೇ ಸ್ಫುಟವಾಗುವದು ಎಂದು ಆಚಾರ್ಯರ ಆಶಯ. ಇದರಿಂದ '**ಆನಂದೀಭವತಿ**' ಎಂಬುದು ಸಮಸ್ತವಾದ ಒಂದೇ ಪದ ಎಂದು ಸ್ಪಷ್ಟವಾಗಿ ತೋರುವದು.

**ಭಾಷ್ಯೋದಾಹೃತ ಶ್ರುತಿಗೆ ಅನೇಕಾರ್ಥಗಳನ್ನು ವಿವರಿಸುವುದು.**

ಜಗನ್ನಾಥಯತಿಗಳು ಭಾಷ್ಯದಲ್ಲಿ ಆಚಾರ್ಯರು ಉದಾಹರಿಸಿದ ಶ್ರುತಿಗಳಿಗೆ ಅನೇಕ ಅರ್ಥಗಳನ್ನು ಸಂಗ್ರಹಿಸಿ ನೀಡುವುದುಂಟು. ಅದಕ್ಕೆ ಈ ಕೆಳಗಿನ ಉದಾಹರಣೆಯನ್ನು ಗಮನಿಸಬಹುದು.

'**ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತ ವಾ ಉ**' ಎಂಬ ಮಂತ್ರಕ್ಕೆ ಅವರು ಮಾಡಿರುವ ವ್ಯಾಖ್ಯಾನ ನಯನಮನೋಹರ. '**ಅಹಂ** = ನಾನು , **ಶರವೇ** = ಹಿಂಸಾಸ್ವಭಾವವುಳ್ಳ **ಬ್ರಹ್ಮದ್ವಿಷೇ** = ಚತುರ್ಮುಖಬ್ರಹ್ಮನ ಐದನೆತಲೆಯನ್ನು ಕತ್ತರಿಸಿದ, ಅಥವಾ ಪ್ರಮೇಯದೀಪದಲ್ಲಿ ಹೇಳಿದ ಪ್ರಕಾರ ಸಂಹಾರಕಾಲದಲ್ಲಿ ಬ್ರಾಹ್ಮಣ ಮೊದಲಾದ ಸಕಲಪ್ರಾಣಿಗಳನ್ನು ದ್ವೇಷಿಸುವ ಅಥವಾ ಸುಧಾದಲ್ಲಿ ಹೇಳಿದಂತೆ **ಬ್ರಹ್ಮದ್ವಿಷಾಂ ಶರವೇ** = ಬ್ರಹ್ಮದ್ವೇಷಿಗಳಾದ ದೈತ್ಯರನ್ನು ಹಿಂಸಿಸುವ, ಅಥವಾ ಚಂದ್ರಿಕಾದಲ್ಲಿ ಹೇಳಿದಂತೆ ದಕ್ಷಪ್ರಜಾಪತಿಯನ್ನು ದ್ವೇಷಿಸುವ ರುದ್ರನಿಗೋಸ್ಕರ **ಹಂತ ವಾ ಉ** = ರುದ್ರನನ್ನು ಕೊಲ್ಲುವದಕ್ಕಾಗಿಯೇ ಹೊರತು ಹೆದರಿಸುವದಕ್ಕಲ್ಲ. ಏಕೆಂದರೆ ದುರ್ಗಾರೂಪದಿಂದ ಅವನನ್ನು ನಾನೇ (ಲಕ್ಷ್ಮಿಯೇ) ಸಂಹರಿಸುವದು. ರುದ್ರನನ್ನು ಕೊಲ್ಲುವದಕ್ಕಾಗಿಯೇ **ಧನುಃ** ಬಿಲ್ಲನ್ನು **ಆತನೋಮಿ** = ಹೆದೆಯೇರಿಸುತ್ತೇನೆ.

## ನಪ್ರಯೋಜನಾಧಿಕರಣ

*(ಅಧ್ಯಾಯ -2, ಪಾದ - 2, ಸೂತ್ರ -33)*

ನಪ್ರಯೋಜನಾಧಿಕರಣದಲ್ಲಿ ಭಗವಂತನು ಮಾಡುವ ಜಗತ್ಸೃಷ್ಟಿಯಿಂದ ಪ್ರಯೋಜನವಿದೆಯೋ ಇಲ್ಲವೋ ? ಎರಡನೇ ಪಕ್ಷದಲ್ಲಿ. 'ಪ್ರಯೋಜನವಿಲ್ಲದೇ ಮಂದನೂ ಯಾವುದೇ ಕಾರ್ಯದಲ್ಲಿ ಪ್ರವೃತ್ತನಾಗಲಾರ. ಹೀಗಿರುವಾಗ ಪ್ರೇಕ್ಷಾವಂತನಾದ ಭಗವಂತ ಯಾವುದೇ ಪ್ರಯೋಜನವಿಲ್ಲದೇ ಜಗತ್ಸೃಷ್ಟಿಯಲ್ಲಿ, ತೊಡಗಲು ಹೇಗೆ ಸಾಧ್ಯ ? ಪ್ರಯೋಜನವಿದೆಯೆಂದರೆ, ಆ ಪ್ರಯೋಜನ ಜಗತ್ಸೃಷ್ಟಿಗಿಂತ ಮುಂಚೆ ಭಗವಂತನಿಗಿಲ್ಲ. ಆದ್ದರಿಂದ ಅವನು ಅಪೂರ್ಣ ಎಂಬ ಶಂಕೆ ಬರುವುದು . ಇದನ್ನು ಇಲ್ಲಿ ಪರಿಹರಿಸುತ್ತಾರೆ.

ಭಗವಂತ ಜಗತ್ಸೃಷ್ಟ್ಯಾದಿಗಳನ್ನು ಪ್ರಯೋಜನದ ಅಪೇಕ್ಷೆ ಇಲ್ಲದೆ ಕೇವಲಾನಂದ (ಸ್ವರೂಪಾನಂದ) ದಿಂದಲೇ ಮಾಡುವನು. ಆನಂದಮತ್ತನಾದ ವ್ಯಕ್ತಿ ಆನಂದದಿಂದಲೇ ನರ್ತನಾದಿಗಳನ್ನು ಹೇಗೆ ಮಾಡುವನೋ ಹಾಗೆ. ಆನಂದಪೂರ್ಣನಾದ ಆತನಿಗೆ ಪ್ರಯೋಜನ ಅಪೇಕ್ಷೆ ಎಲ್ಲಿಯದು ? ಮುಕ್ತರಾದ ಸಾಮಾನ್ಯ ಜೀವರೂ ಆಪ್ತಕಾಮರಾಗುವರೆಂದ ಮೇಲೆ ಮುಕ್ತನಿಯಾಮಕನಾದ ಭಗವಂತ ಆಪ್ತಕಾಮನೆಂದು ಹೇಳುವದೇನು ? ಹೀಗೆ ಭಗವಂತನ ಜಗತ್ಸೃಷ್ಟ್ಯಾದಿಕ್ರಿಯೆ ಸ್ವಾಭಾವಿಕವಾದ್ದರಿಂದ ಅದಕ್ಕೆ ಪ್ರಯೋಜನದ ಅಪೇಕ್ಷೆ ಇಲ್ಲ ಎಂದು

**'ಸೃಷ್ಟ್ಯಾದಿಕಂ ಹರಿರ್ನೈವ ಪ್ರಯೋಜನಮಪೇಕ್ಷ್ಯ ತು ।**
**ಕುರುತೇ ಕೇವಲಾನಂದಾದ್ ಯಥಾ ಮತ್ತಸ್ಯ ನರ್ತನಂ ॥**
**ಪೂರ್ಣಾನಂದಸ್ಯ ತಸ್ಯೇಹ ಪ್ರಯೋಜನಮತಿಃ ಕುತಃ ।**
**ಮುಕ್ತಾ ಅಪ್ಯಾಪ್ತಕಾಮಾಃ ಸ್ಯುಃ ಕಿಮು ತಸ್ಯಾಖಿಲಾತ್ಮನಃ ॥'**

ಎಂಬ '**ನಾರಾಯಣ ಸಂಹಿತಾ**' ವಚನದಿಂದ ಆಚಾರ್ಯರು ಸಮರ್ಥಿಸಿ, ಈ ವಿಷಯದಲ್ಲಿ ಆಚಾರ್ಯರು '**ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ**' ಎಂಬ ಶ್ರುತಿಯನ್ನೂ ಉದಾಹರಿಸುತ್ತಾರೆ. ಈ ಶ್ರುತಿಗೆ ಆಚಾರ್ಯರು ಬೇರೆ ಬೇರೆ ಗ್ರಂಥದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಹೇಳಿರುವ ಅರ್ಥಗಳೆಲ್ಲವನ್ನೂ ಭಾಷ್ಯದೀಪಿಕಾಕಾರರು ಕ್ರೋಡಿಕರಿಸಿ ನೀಡುವ ರೀತಿ ಅನ್ಯಾದೃಶವಾದುದು.

**'ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ '**

ಎಂಬ ವಚನದಂತೆ ಕೆಲವರು ಭಗವಂತನು ಸೃಷ್ಟ್ಯಾದಿಗಳನ್ನು ಮಾಡುವದು ಭೋಗಕ್ಕಾಗಿ ಎನ್ನುತ್ತಾರೆ. ಮತ್ತೆ ಕೆಲವರು ಕ್ರೀಡೆಗಾಗಿ ಜಗತ್ಸೃಷ್ಟಿ ಎನ್ನುತ್ತಾರೆ. ಅವುಗಳಲ್ಲಿ 'ಈಶ್ವರನ ಜಗತ್ಸೃಷ್ಟ್ಯಾದಿಪ್ರವೃತ್ತಿ ಕ್ರೀಡೆಗೋಸ್ಕರ' ಎಂದು ಪರರು ಹೇಳುವದನ್ನು ಒಪ್ಪದೇ ಈಶ್ವರನ ಜಗತ್ಸೃಷ್ಟ್ಯಾದಿಪ್ರವೃತ್ತಿ ಕ್ರೀಡಾರೂಪ ಎಂದು ವೇದಪುರುಷ ತಿಳಿಸುತ್ತಿದ್ದಾನೆ **'ದೇವಸ್ಯೈಷ ಸ್ವಭಾವೋಽಯಂ'** ಎಂದು.

1. **ದೇವಸ್ಯ** = ಕ್ರೀಡಾದಿಗುಣವಿಶಿಷ್ಟನಾದ ಹರಿಗೆ, **ಅಯಂ** = ಈ, **ಏಷಃ** = ಜಗತ್ಸೃಷ್ಟ್ಯಾದಿಗಳ ವಿಷಯದಲ್ಲಿ ಇಚ್ಛೆಯು, ಅಂದರೆ ಇಚ್ಛಾಪೂರ್ವಕ ಪ್ರವೃತ್ತಿಯು **ಸ್ವಭಾವ ಏವ** = ಸ್ವಭಾವವೇ. ಪ್ರಯೋಜನಕ್ಕಾಗಿ ಅಲ್ಲ. ಏಕೆಂದರೆ ಆಪ್ತಕಾಮಸ್ಯ = ಪೂರ್ಣಕಾಮನಾದ ಭಗವಂತನಿಗೆ ಕಾ ಸ್ಪೃಹಾ ? = ಫಲದ ಬಯಕೆ ಇದೆಯೇನು? ಯಾವುದೇ ರೀತಿಯ ಫಲೇಚ್ಛೆ ಭಗವಂತನಿಗೆ ಇಲ್ಲ.

*(ಇದು ಸುಧಾದಲ್ಲಿ ಹೇಳಿರುವ ಅರ್ಥ)*

2. **ಏಷಃ** = ಈ ಅವತಾರಾದಿಗಳು, **ದೇವಸ್ಯ ಸ್ವಭಾವಃ** = ಭಗವಂತನ ಸ್ವಭಾವವು. ಆ ಸ್ವಭಾವವಾದರೂ **ಅಯಂ** = ಭಗವಂತನೇ ಹೊರತು ಭಗವಂತನಿಗಿಂತ ಭಿನ್ನವಲ್ಲ.

*(ಇದು 'ನ್ಯಾಯದೀಪಿಕಾ'ದಲ್ಲಿ ಹೇಳಿದ ಅರ್ಥ)*

3. **ಅಯಮೇಷಃ** = ಈ ಇಚ್ಛೆಯು ಅಂದರೆ ಭಗವಂತನ ಜನರ ರಕ್ಷಣೆಗೋಸುಗ ಅವತರಿಸುವ ಇಚ್ಛೆಯು ಲೀಲಾರೂಪ. ಅದು ಭಗವಂತನ ಸ್ವಭಾವ.

*(ಇದು ಗೀತಾಭಾಷ್ಯ ಹಾಗೂ ಪ್ರಮೇಯದೀಪಗಳಲ್ಲಿ ಹೇಳಿದ ಅರ್ಥ)*

**'ಆಪ್ತಕಾಮಸ್ಯ ಕಾ ಸ್ಪೃಹಾ'** ಎಂಬಲ್ಲಿ ಭಗವಂತನಿಗೆ ಯಾವ ಇಚ್ಛೆಯೂ ಇಲ್ಲ ಎಂದು ಇಚ್ಛಾಸಾಮಾನ್ಯವನ್ನು ನಿಷೇಧಿಸಲಾಗಿದೆ ಎಂದು ಭಾವಿಸಬಾರದು. ಏಕೆಂದರೆ **'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ'** (ಜಗತ್ತನ್ನು ಸೃಜಿಸಲು ಇಚ್ಛಿಸುವದೇ ಭಗವಂತ ಮಾಡುವ ಜಗತ್ಸೃಷ್ಟಿ) ಎಂದು ನಮ್ಮ ಸಿದ್ಧಾಂತದ ನಿಲುವಾಗಿದೆ. ಆದ್ದರಿಂದ **'ಕಾ ಸ್ಪೃಹಾ ?'** ಎಂದರೆ ಜಗತ್ಸೃಷ್ಟಿಯಿಂದ ಉಂಟಾಗುವ ಯಾವುದೇ ಫಲದ ಬಯಕೆ ಭಗವಂತಗಿಲ್ಲ ಎಂದು ಅರ್ಥ. ತತ್ತ್ವಪ್ರದೀಪ, ಸತ್ತರ್ಕದೀಪಾವಲಿಗಳಲ್ಲಿ ಹಾಗೆಯೇ ಹೇಳಲಾಗಿದೆ.

ಇಲ್ಲಿ ಕ್ರೀಡೆಯೇ ಲೀಲೆ. ಕ್ರೀಡೆಯಾದರೂ ಭಗವಂತನ ಸ್ವಭಾವ ಎಂದು ಹೇಳಿರುವದರಿಂದ ಅದಕ್ಕೆ ಪ್ರಯೋಜನತ್ವವು ಸಿದ್ಧಾಂತದಲ್ಲಿ ಅಭಿಪ್ರೇತವಾಗಿರುವುದಿಲ್ಲ.

**'ತಸ್ಯಾಪಿ ವಿಷ್ಣೋಃ ಸೃಷ್ಟಿಂ ತು ಕೇಚಿದಾಹುರನೈಪುಣಾಃ ।
ಅತೃಪ್ತಸ್ಯೈವ ಭೋಗಾರ್ಥಂ ಕ್ರೀಡಾರ್ಥಂ ತು ವಿಪಶ್ಚಿತಃ ॥
ಸಾ ಚ ಕ್ರೀಡಾ ಸ್ವಭಾವೋಽಸ್ಯ ಕುತೋಽತೃಪ್ತ್ಯಾ ಸ್ಪೃಹಾ ವಿಭೋಃ ॥'
॥ ಇತಿ ॥**

(ಅತೃಪ್ತನಾದ ಭಗವಂತನು ಭೋಗಕ್ಕಾಗಿ ಜಗತ್ಸೃಷ್ಟಿ ಮಾಡುವನೆಂದು ಕೆಲವರು ಹೇಳುವರು. ಕೆಲವರು ಕ್ರೀಡೆಗಾಗಿ ಎನ್ನುವರು. ಆದರೆ ಜಗತ್ಸೃಷ್ಟ್ಯಾದಿಕ್ರೀಡೆಯು ಭಗವಂತನ ಸ್ವಭಾವವಾಗಿದೆ. ಅಂತಹ ಭಗವಂತನಿಗೆ ಅತೃಪ್ತಿಯಿಂದ ಜಗತ್ಸೃಷ್ಟಿಯ ಬಯಕೆ ಎಲ್ಲಿಂದ ಬರಬೇಕು?) ಎಂದು ಮಾಂಡೂಕಭಾಷ್ಯದಲ್ಲಿ ಹೀಗೆಯೇ ಹೇಳಲಾಗಿದೆ.

## ಪತ್ಯುರಧಿಕರಣ

*(ಅಧ್ಯಾಯ -2, ಪಾದ-2, ಸೂತ್ರ-37)*

**ಪತ್ಯುರಧಿಕರಣದಲ್ಲಿ** ಪಾರತಂತ್ರ್ಯ ಮೊದಲಾದ ದೋಷಗಳಿರುವದರಿಂದ ಪಶುಪತಿಯು ಜಗತ್ಕರ್ತನಲ್ಲ ಎಂದು ಸಮರ್ಥಿಸಿದ್ದಾರೆ. ಈ ಅಧಿಕರಣದಲ್ಲಿ **'ಸಂಬಂಧಾನುಪಪತ್ತೇಃ'** (2-2-38) ಎಂಬ ಸೂತ್ರದಲ್ಲಿ ಹೇಳಿದ ಕರ್ತೃತ್ವಾನುಪಪತ್ತಿಯನ್ನೇ **'ಅಂತವತ್ತ್ವಮಸರ್ವಜ್ಞತಾ ವಾ'** (2-2-41) ಎಂಬ ಸೂತ್ರದಲ್ಲಿಯೂ ಹೇಳಿದಂತೆ ತೋರುತ್ತದೆ. ಈ ಸೂತ್ರಗಳಲ್ಲಿ ಪ್ರತಿಪಾದಿತವಾದ ಪ್ರಮೇಯಭೇದವನ್ನು ಭಾಷ್ಯ ದೀಪಿಕಾಕಾರರು ಹೀಗೆ ಸ್ಪಷ್ಟಪಡಿಸುತ್ತಾರೆ.

**'अत्र सम्बन्धानुपपत्तिसूत्रे शरीराभावे कर्तृत्वोपयुक्तज्ञानाद्यभावेन कर्तृत्वरूपसम्बन्धानुपपत्तिरुक्ता। अत्र तु शरीराभावे ज्ञानाभावेना-सर्वज्ञत्वात् जगत्कर्तृत्वानुपपत्तिरुच्यतेऽत इति भेदो द्रष्टव्यः।**

ಸಂಬಂಧಾನುಪಪತ್ತಿಸೂತ್ರದಲ್ಲಿ ಶರೀರವಿಲ್ಲದಿದ್ದಾಗ ಕರ್ತೃತ್ವಕ್ಕೆ ಉಪಯುಕ್ತವಾದ ಜ್ಞಾನಾದಿಗಳು ಇಲ್ಲದಿರುವದರಿಂದ ಕರ್ತೃತ್ವರೂಪಸಂಬಧದ ಅನುಪಪತ್ತಿಯನ್ನು ಪಶುಪತಿಯಲ್ಲಿ ಹೇಳಲಾಗಿದೆ.

**'ಅಂತವತ್ತ್ವಮಸರ್ವಜ್ಞತಾ ವಾ'** ಎಂಬ ಸೂತ್ರದಲ್ಲಿ, ಶರೀರವಿಲ್ಲದಿದ್ದ ಪಕ್ಷದಲ್ಲಿ ಜ್ಞಾನವಿಲ್ಲದಿರುವದರಿಂದ ಪಶುಪತಿಗೆ ಅಸರ್ವಜ್ಞತ್ವವು ಬರುವದರಿಂದ ಜಗತ್ಕರ್ತೃತ್ವವು ಕೂಡಲಾರದು ಎಂದು ಹೇಳುತ್ತಿದ್ದಾರೆ ಎಂದು ಭೇದವನ್ನು ತಿಳಿಯಬೇಕು.

## ತೃತೀಯಪಾದದಲ್ಲಿ ಪ್ರತಿಪಾದ್ಯ ಪ್ರಮೇಯ

ದ್ವಿತೀಯಾಧ್ಯಾಯದ ತೃತೀಯಪಾದದ ಪ್ರಾರಂಭದ ಭಾಷ್ಯವಾಕ್ಯ ಹೀಗಿದೆ.

**'जीवपरमात्माधिभूताधिदैवेषु श्रुतीनां परस्परविरोधमपाकरोत्यनेन पादेन ।'** ಎಂಬುದಾಗಿ.

ಈ ಭಾಷ್ಯವಾಕ್ಯದ ಆಶಯವನ್ನು ಭಾಷ್ಯದೀಪಿಕಾಕಾರರು ತಮ್ಮ ವ್ಯಾಖ್ಯಾನದಲ್ಲಿ ವಿಶದವಾಗಿ ನಿರೂಪಿಸಿದ್ದಾರೆ . ಈ ಪಾದದಲ್ಲಿ , ಜೀವ, ಪರಮಾತ್ಮ , ಅಧಿಭೂತ, ಅಧಿದೈವ ಇವುಗಳ ಉತ್ಪತ್ತಿ ವಿಷಯದಲ್ಲಿ ಶ್ರುತಿಗಳಿಗಿರುವ ಪರಸ್ಪರ ವಿರೋಧವನ್ನು ಸೂತ್ರಕಾರರು ನಿರಾಕರಿಸುತ್ತಾರೆ . ಅಧ್ಯಾತ್ಮ ವಿಷಯವಿಚಾರವು ಜಿಜ್ಞಾಸುವಿನ ಅಂತಿಮ ಆಯ್ಕೆಯಾಗಿದೆ . ಆದ್ದರಿಂದ ಅಧ್ಯಾತ್ಮವಿಷಯದಲ್ಲಿ ಶ್ರುತಿಗಳಿಗಿರುವ ಪರಸ್ಪರ ವಿರೋಧವನ್ನು ನಾಲ್ಕನೇ ಪಾದದಲ್ಲಿ ನಿರಾಕರಿಸುವರು.

ವಾಸ್ತವಿಕವಾಗಿ ಈ ಪಾದದಲ್ಲಿ , ಮೊದಲು ಒಂದೊಂದು ಅಧಿಕರಣದಲ್ಲಿ ಒಂದೊಂದು ಅಧಿಭೂತದ ಅಂದರೆ ಆಕಾಶ ವಾಯುಗಳ ವಿಚಾರಮಾಡಿ ನಂತರ **'ಅಸಂಭವಸ್ತು'** , **'ನಾತ್ಮಾಽಶ್ರುತೇಃ'** ಎಂಬ ಎರಡು ಅಧಿಕರಣಗಳಲ್ಲಿ ಪರಮಾತ್ಮನ ವಿಚಾರ ಮಾಡಿ, ನಂತರ **'ಜ್ಞೋಽತ ಏವ '** ಎಂಬುದರಿಂದ ಆರಂಭಿಸಿ ಪಾದ ಮುಗಿಯುವವರೆಗೆ ಜೀವವಿಚಾರವನ್ನು ಮಾಡಿದ್ದಾರೆ. ಆದ್ದರಿಂದ ಅದಕ್ಕನುಗುಣವಾಗಿ ಆಚಾರ್ಯರು **'ಅಧಿಭೂತಾಧಿದೈವಪರಮಾತ್ಮ ಜೀವೇಷು'** ಎಂದು ನಿರ್ದೇಶಿಸಬೇಕಿತ್ತು. ಹಾಗಿದ್ದರೂ ಜೀವ ವಿಚಾರ ಬಹುಳವಾಗಿರುವದರಿಂದ ಅದರ ವಿವಕ್ಷೆಯಿಂದ ಕ್ರಮವನ್ನು ಉಲ್ಲಂಘಿಸಲಾಗಿದೆ.

ವಾಸ್ತವಿಕವಾಗಿ ಈ ಪಾದದಲ್ಲಿ ಅಧಿದೈವ ಶ್ರುತಿಗಳಿಗೆ ಪರಸ್ಪರ ವಿರೋಧ ಪರಿಹಾರ ಪ್ರತ್ಯೇಕವಾಗಿ ಮಾಡಿರುವದಿಲ್ಲ. ಹಾಗಿದ್ದರೂ ಭೂತವಿಚಾರಪರವಾದ ಸೂತ್ರಗಳೇ ಭೂತಾಭಿಮಾನಿದೇವತಾವಿವಕ್ಷೆಯಿಂದ ಅಧಿದೈವಪರಗಳೂ ಆಗಿವೆ ಎಂಬ ಅಭಿಪ್ರಾಯ-ದಿಂದ ಹೀಗೆ ಹೇಳಿದ್ದಾರೆ. ಅಥವಾ **'ಏತೇನ ಮಾತರಿಶ್ವಾ ವ್ಯಾಖ್ಯಾತಃ'** (2-3-8) ಎಂಬುದರಿಂದ ಅಧಿದೈವವಿಚಾರವನ್ನೂ ಮಾಡಲಾಗಿದೆ.

ಇಲ್ಲಿ **'ಅಧಿಭೂತ '**ವೆಂದರೆ **'ಭೂತಮಧಿಕೃತ್ಯ ವರ್ತಮಾನಂ'** ಭೂತಗಳ ಕುರಿತಾಗಿ ಇರುವಂಥದ್ದು ಎಂದರ್ಥ. ಕಾರ್ಯಕಾರಣಗಳಿಂದ ಸಹಿತವಾದ ಆಕಾಶಾದಿಭೂತಗಳು **'ಅಧಿಭೂತ'** ಎನಿಸುವವು . **'ಅಧಿಭೂತಾನಿ ಕಾರ್ಯ-**

**ಕಾರಣೋಪೇತಾನಿ ವಿಯದಾದಿ ಭೂತಾನಿ**' ಎಂದು ಸುಧಾದಲ್ಲಿ ಹೀಗೆಯೇ ಹೇಳಲಾಗಿದೆ. '**ಅಧಿಭೂತಾದಿಶಬ್ದೈಃ ಆಕಾಶಾದೀನಿ ಉಚ್ಯಂತೇ**' ಎಂದು ನ್ಯಾಯವಿವರಣ ಟೀಕಾದಲ್ಲಿಯೂ **ಅಧಿಭೂತೇಷು ಮಹಾಭೂತೇಷ್ವಾಕಾಶಾದಿಷು '**ಇಮಾನಿ ಪಂಚಭೂತಾನಿ ಪೃಥಿವೀವಾಯ್ವಾಕಾಶಾಪೋಜ್ಯೋತೀಂಷಿ**' (ಐ. 3.3) **ಇತಿ ಶ್ರುತಿಃ**' ಎಂದು ತತ್ತ್ವಪ್ರದೀಪದಲ್ಲಿಯೂ '**ಅಧಿಭೂತ**' ಶಬ್ದದಿಂದ ಆಕಾಶಾದಿಭೂತಗಳನ್ನು ಗ್ರಹಿಸಿರುವದು ಕಂಡುಬರುವದು.

ಅಧಿಭೂತಾಭಿಮಾನಿ ದೇವತೆಯೇ '**ಅಧಿದೈವತ**' ಎನಿಸುವದು. '**ಅಧಿಗತಂ ಚ ತದ್ ದೈವತಂ ಚ**' ಎಂದು ವಿಗ್ರಹ. '**ಅಧಿದೈವೇಷು ಇತಿ ತದಭಿಮಾನಿ ತತ್ಸಂಬಂಧಿ ವಿವಕ್ಷಯಾ ಇತಿ ಅಧಿದೈವಾನಿ ಅವ್ಯಕ್ತಾಭಿಮಾನಿದೇವತಾ ಇತಿ ಚ**' ಎಂದು ತತ್ತ್ವಪ್ರದೀಪ ಮತ್ತು ಸುಧಾದಲ್ಲಿ ಹಾಗೆಯೇ ಹೇಳಲಾಗಿದೆ. ಅಧಿಭೂತ ಶಬ್ದದಂತೆಯೇ ಅಧ್ಯಾತ್ಮಶಬ್ದದಲ್ಲಿಯೂ '**ಆತ್ಮಾನಂ ದೇಹಂ ಜೀವಂ ಚ ಅಧಿಕೃತ್ಯ ವರ್ತಮಾನಂ ಅಧ್ಯಾತ್ಮಂ**' ಎಂದು ವಿಗ್ರಹವನ್ನು ತಿಳಿಯಬೇಕು.

## ವಿಯದಧಿಕರಣ

*(ಅಧ್ಯಾಯ -2, ಪಾದ -3, ಸೂತ್ರ -1)*

ವಿಯದಧಿಕರಣದಲ್ಲಿ, '**ಆತ್ಮನ ಆಕಾಶಃ ಸಂಭೂತಃ**' ಎಂಬ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಗೆ '**ಅನಾದಿರ್ವಾ ಅಯಮಾಕಾಶಃ ಶೂನ್ಯೋಽಲೌಕಿಕಃ**' ಎಂಬುದಾಗಿ ಉತ್ಪತ್ತಿಯನ್ನು ನಿಷೇಧಿಸುವ ಶ್ರುತಿಯ ವಿರೋಧವನ್ನು ಪರಿಹರಿಸಿದ್ದಾರೆ.

ಇಲ್ಲಿ ಆಕಾಶವು ಅನಾದಿಯಾಗಿರುವದಕ್ಕೆ ಕಾರಣವನ್ನು '**ಶೂನ್ಯಃ ಅಲೌಕಿಕಃ**' ಎಂಬುದಾಗಿ ಶ್ರುತಿಯು ವಿವರಿಸುತ್ತಿದೆ. ಆಕಾಶವು ಶೂನ್ಯವಾಗಿರುವದರಿಂದ ಅಂದರೆ ಸೂಕ್ಷ್ಮವಾಗಿರುವದರಿಂದ ಅನಾದಿಯೆನಿಸಿದೆ.

ಹಾಗಾದರೆ ಸೂಕ್ಷ್ಮತ್ವವು ವಾಯುವಿನಲ್ಲಿಯೂ ಇರುವದರಿಂದ ಅದೂ ಅನಾದಿಯಾಗ-ಬೇಕಾದೀತು. ಅಂದರೆ '**ಆಕಾಶಃ ಅನಾದಿಃ ಸೂಕ್ಷ್ಮತ್ವಾತ್** ಎಂಬ ಅನುಮಾನದ ಸೂಕ್ಷ್ಮತ್ವ ಹೇತುವು' ಅನಾದಿಯಲ್ಲದ ವಾಯುವಿನಲ್ಲಿಯೂ ಬರುವದರಿಂದ ವ್ಯಭಿಚಾರ ದೋಷಬರುವದು. ಅದಕ್ಕೋಸ್ಕರ ಶ್ರುತಿಯಲ್ಲಿ '**ಅಲೌಕಿಕಃ** ಎಂಬ ಪದವನ್ನು ಕೊಡಲಾಗಿದೆ. ಅಲೌಕಿಕ ಎಂದರೆ ಅತೀಂದ್ರಿಯ ಎಂದರ್ಥ. ವಾಯುವು ಸೂಕ್ಷ್ಮವಾಗಿದ್ದರೂ ಅತೀಂದ್ರಿಯ-ವಲ್ಲವಾದ್ದರಿಂದ ವ್ಯಭಿಚಾರ ಇಲ್ಲ.

ಇದರ ಮೇಲೆ ಬರುವ ಪ್ರಶ್ನೆ. ಅವ್ಯಾಕೃತಾಕಾಶವು ಸಾಕ್ಷೀಂದ್ರಿಯಗೋಚರ ವಾಗಿರುವದರಿಂದ ಅತೀಂದ್ರಿಯವೆನಿಸುವುದು ಹೇಗೆ ? ಇದಕ್ಕೆ ಉತ್ತರ ತತ್ತ್ವಪ್ರದೀಪದಲ್ಲಿದೆ.

ಅವ್ಯಾಕೃತಾಶ ಸಾಕ್ಷಿವೇದ್ಯವಾಗಿದ್ದರೂ ಲೌಕಿಕ ಪ್ರಾಕೃತೇಂದ್ರಿಯಕ್ಕೆ ಗೋಚರ-ವಾಗದಿರುವದರಿಂದ ಅತೀಂದ್ರಿಯವೆನಿಸುವದು. ಹೀಗೆ ಹೇಳಿದರೂ ವಾಯುವಿನಲ್ಲಿ ಬರುವ ವ್ಯಭಿಚಾರವನ್ನು ಪರಿಹರಿಸಲು ಸಾಧ್ಯವಿಲ್ಲ. ಏಕೆಂದರೆ '**ಆಕಾಶವಾಯೂ ತ್ವವ್ಯಕ್ತೌ**' ಎಂಬ ಭಾಗವತ ತಾತ್ಪರ್ಯವಚನದಂತೆ ಹಾಗೂ '**ಪ್ರತ್ಯಕ್ಷಾಪ್ರತ್ಯಕ್ಷಪಂಚಮಹಾಭೂತ ವಿಷಯತ್ವಾತ್**' (ಪಂಚಭೂತಗಳಲ್ಲಿ ಪೃಥಿವೀ,ಜಲ,ತೇಜಸ್ಸುಗಳು ಪ್ರತ್ಯಕ್ಷ. ಆಕಾಶವಾಯುಗಳು ಅಪ್ರತ್ಯಕ್ಷ. ಆದ್ದರಿಂದ ಪಂಚಭೂತಗಳು ಪ್ರತ್ಯಕ್ಷಾಪ್ರತ್ಯಕ್ಷ ವಿಷಯ ಎನಿಸಿವೆ ಎಂದು ಸುಧಾವಾಕ್ಯದ ಅರ್ಥ.) ಎಂಬ ಸುಧಾವಚನದ ಪ್ರಕಾರವೂ ವಾಯುವೂ ಅತೀಂದ್ರಿಯ. ತಥಾ ಚ ಅನಾದಿತ್ವರೂಪ ಸಾಧ್ಯವಿಲ್ಲ. ಅತೀಂದ್ರಿಯತ್ವರೂಪಹೇತು-ವಿರುವದರಿಂದ ವಾಯುವಿನಲ್ಲಿ ವ್ಯಭಿಚಾರ ಬಂದೇ ಬರುವುದು ಎಂದು ಶಂಕಿಸುವಂತಿಲ್ಲ.

ಏಕೆಂದರೆ '**ಆಕಾಶವಾಯೂ ತ್ವವ್ಯಕ್ತೌ**' ಎಂಬಲ್ಲಿ ಭೂತಾಕಾಶವು ದಿವ್ಯದೃಷ್ಟಿಗೆ ಗೋಚರವಾಗಿರುವದರಿಂದ ಆ ವಿಷಯದಲ್ಲಿ ಅವ್ಯಕ್ತಶಬ್ದಕ್ಕೆ 'ಭೂತಾಕಾಶವನ್ನು ಬಿಟ್ಟು ಅವ್ಯಾಕೃತಾಕಾಶ' ಎಂದು ಅರ್ಥಸಂಕೋಚ ಅವಶ್ಯ ಮಾಡಬೇಕು. ಅದರಂತೆ ವಾಯುವಿಗೂ ಸ್ಪಾರ್ಶನೇಂದ್ರಿಯಗ್ರಾಹ್ಯತ್ವವನ್ನು ಅಂಗೀಕರಿಸಿ ವಾಯುವಿನಲ್ಲಿ ಶ್ರುತವಾಗಿರುವ ಅವ್ಯಕ್ತ ಶಬ್ದಕ್ಕೆ ಸ್ಪರ್ಶೇಂದ್ರಿಯಭಿನ್ನವಾದ ಇತರೇಂದ್ರಿಯಗಳಿಂದ ಅಗ್ರಾಹ್ಯ ಎಂಬುದಾಗಿ ಅರ್ಥಸಂಕೋಚ ಮಾಡಲು ಸಾಧ್ಯವಿದೆ. ಆದ್ದರಿಂದಲೇ ಸುಧಾವಾಕ್ಯದಲ್ಲಿರುವ ಪ್ರತ್ಯಕ್ಷಪದವೂ ಕೇವಲ ಭೂತಾಕಾಶಪರವೆಂದು ತಿಳಿಯಬೇಕು.

ವಾಯುವು ಸ್ಪರ್ಶೇಂದ್ರಿಯ (ತ್ವಗಿಂದ್ರಿಯ)ಕ್ಕೆ ವಿಷಯ ಎಂದಂಗೀಕರಿಸಿದ ಪಕ್ಷದಲ್ಲಿ ಪ್ರಮಾಣಪದ್ಧತಿಯಲ್ಲಿ '**ವಾಯುಸ್ಪರ್ಶೋಽಪಿ ತ್ವಚೋ ವಿಷಯಃ**' ಎಂದು ಕೇವಲ ವಾಯುಸ್ಪರ್ಶವನ್ನು ಗ್ರಹಣ ಮಾಡಿರುವದು ಕೂಡಲಾರದು ಎಂದು ಶಂಕಿಸುವಂತಿಲ್ಲ. ಏಕೆಂದರೆ '**ವಾಯುಸ್ಪರ್ಶೋಽಪಿ**' ಎಂಬುದಕ್ಕೆ '**ವಾಯುಃ ತತ್ ಸ್ಪರ್ಶೋಽಪಿ**' ವಾಯು ಹಾಗೂ ಅದರ ಸ್ಪರ್ಶ ಎಂದು ಅರ್ಥೈಸುವದರಿಂದ ಯಾವುದೇ ವಿರೋಧವಿಲ್ಲ.

ಅಥವಾ, ಭಾಗವತತಾತ್ಪರ್ಯ ಹಾಗೂ ಸುಧಾ ಗ್ರಂಥಕ್ಕೆ ಅನುಗುಣವಾಗಿ ವಾಯು ಅತೀಂದ್ರಿಯ ಎಂದೊಪ್ಪಿದರೂ ಅಡ್ಡಿಯಿಲ್ಲ. ಹಾಗಿದ್ದರೂ ವ್ಯಭಿಚಾರವೇನೂ ಬರುವದಿಲ್ಲ. ಭೂತಾಕಾಶದಂತೆ ವಾಯುವೂ ಯೋಗಿಗಳ ಚಾಕ್ಷುಷ ಪ್ರತ್ಯಕ್ಷಕ್ಕೆ ವಿಷಯವಾಗಿರುವದರಿಂದ ಪ್ರಾಕೃತೇಂದ್ರಿಯ ಗ್ರಾಹ್ಯತ್ವವೇ ವಾಯುವಿನಲ್ಲಿದೆ. ಪ್ರಾಕೃತೇಂದ್ರಿಯಾಗ್ರಾಹ್ಯತ್ವವೆಂಬ ಹೇತು ವಾಯುವಿನಲ್ಲಿ ಇಲ್ಲದಿರುವದರಿಂದ ವ್ಯಭಿಚಾರದೋಷವಿಲ್ಲ.

## ಮಾಯಾಶಬ್ದಾರ್ಥ

ಎರಡನೇ ಅಧ್ಯಾಯದ ಮೂರನೇ ಪಾದದಲ್ಲಿ ಬರುವ ಅಧಿಕರಣ '**ತದಭಿಧ್ಯಾನಾಧಿಕರಣ**'. (2-3-12) ಈ ಅಧಿಕರಣದಲ್ಲಿ

**'ತಸ್ಯಾಭಿಧ್ಯಾನಾದ್ ಯೋಜನಾತ್ ತತ್ವಭಾವಾದ್**
**ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ'**

ಎಂಬ ಶ್ರುತಿಯ ಅರ್ಥವನ್ನು ವಿವರಿಸುವಾಗ ಭಾಷ್ಯದೀಪಿಕಾಕಾರರು '**ಮಾಯಾ**' ಶಬ್ದಾರ್ಥದ ವಿಮರ್ಶೆಮಾಡಿದ್ದಾರೆ. ಇಲ್ಲಿ ಮಾಯಾಶಬ್ದದಿಂದ '**ಮಾಯಾಽವಿದ್ಯಾ-ಪ್ರಕೃತಿರಿತ್ಯಾದಿ ಶಬ್ದಾಭಿಧೇಯಮನಾದ್ಯೇವ ಕಿಮಪಿ ದ್ರವ್ಯಮಂಗೀಕರಣೀಯಂ**' (ಮಾಯಾ, ಅವಿದ್ಯಾ, ಪ್ರಕೃತಿ ಮುಂತಾದ ಶಬ್ದಗಳಿಂದ ಕರೆಯಲ್ಪಡುವ, ಅನಾದಿಯಾದ ಯಾವುದೋ ಒಂದು ದ್ರವ್ಯವೆಂದಂಗೀರಿಸ ಬೇಕು) ಎಂಬ ಸುಧಾಕಾರರ ಮಾತಿನಂತೆ. ಸ್ಮೃತಿಸಿದ್ಧವಾದ ಎರಡು ಬಗೆಯ ದುಷ್ಟಪ್ರಕೃತಿಗಳನ್ನು ಇಟ್ಟುಕೊಳ್ಳಬೇಕು. ಈ ಅನಾದಿಯಾಗಿ ದುಷ್ಟಪ್ರಕೃತಿಗಳು –

**ಅಜೇ ದ್ವೇ ಪ್ರಕೃತೀ ದುಷ್ಟೇ ನೃಷು ಪ್ರಾತಿಸ್ವಿಕಂ ಸ್ಥಿತೇ ।**
**ಸ್ವಗುಣಾಚ್ಛಾದಿಕಾ ತ್ವೇಕಾ ಪರಮಾಚ್ಛಾದಿಕಾ ಪರಾ ॥**

**ಸ್ವಗುಣಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ ।**
**ವ್ಯಾಘುಟ್ಯ ಮೋಕ್ಷಪದವೀಂ ದದಾತಿ ಪುರುಷೋತ್ತಮಃ ॥**

ಎಂಬ ಸ್ಮೃತಿಸಿದ್ಧವಾದ್ದರಿಂದ ಪ್ರಾಮಾಣಿಕವಾಗಿವೆ. (ಅನಾದಿಯಾದ ಎರಡು ದುಷ್ಟಪ್ರಕೃತಿಗಳು ಮನುಷ್ಯರಲ್ಲಿ ಪ್ರತ್ಯೇಕವಾಗಿ ಇವೆ. ಒಂದು ಸ್ವಗುಣಾಚ್ಛಾದಿಕಾ ಇನ್ನೊಂದು ಪರಮಚ್ಛಾದಿಕಾ. ಮೋಕ್ಷಾಧಿಕಾರಿಗಳಾದ ಸಜ್ಜೀವರ, ಸ್ವರೂಪಭೂತ ಜ್ಞಾನಾನಂದಾದಿಗುಣಗಳನ್ನು ಆಚ್ಛಾದಿಸುವ ತಾಮಸ ಪ್ರಕೃತಿ ಸ್ವಗುಣಾಚ್ಛಾದಿಕಾ ಎನಿಸುವದು. ಲಿಂಗದೇಹ ಅನಿರುದ್ಧ ದೇಹಗಳ ಮಧ್ಯದಲ್ಲಿರುವ ರಾಜಸಪ್ರಕತಿಯು ಪರಮಾಚ್ಛಾದಿಕಾ ಎನಿಸುವದು. ಇದು ಜೀವರಿಗೆ ಪರಮಾತ್ಮನ ಜ್ಞಾನ ಬರಲು ಪ್ರತಿಬಂಧಕವಾಗಿದೆ. ಈ ಎರಡು ಪ್ರಕೃತಿಗಳಲ್ಲಿ ಸ್ವಗುಣಾಚ್ಛಾದಕವಾದ ತಾಮಸಪ್ರಕೃತಿಯನ್ನು ಸಂಹರಿಸಿ, ಪರಮಾಚ್ಛಾದಕ ಪ್ರಕೃತಿಯನ್ನು ಜೀವನ ಶರೀರದಿಂದ ದೂರಸರಿಸಿ, ಪುರುಷೋತ್ತಮನು ಭಕ್ತರಿಗೆ ಮೋಕ್ಷವನ್ನು ಕರುಣಿಸುತ್ತಾನೆ.)

ಈ ಪ್ರಕೃತಿಗಳು ದುಷ್ಟ ಎನ್ನುವ ವಿಷಯದಲ್ಲಿ ಈ ಕೆಳಗಿನ ಸುಧಾವಾಕ್ಯವು ಆಧಾರವಾಗಿದೆ.

**'ಸ ಏವ ಈಶ್ವರಃ ಸ್ವಪ್ರಕಾಶಮಪಿ ಸ್ವರೂಪಚೈತನ್ಯಂ ಸ್ವಾಧಿಷ್ಠಾನಲಬ್ಧಪರಿಮಾಣ ಮಹದಹಂಕಾರಾದಿ ಪ್ರಕೃತ್ಯಂಶೈಃ ಸಂಯೋಜ್ಯ ಅವಿದ್ಯಮಾನಮೇವಾಸ್ಯ ಕರ್ತೃತ್ವಾದಿ ಸ್ವಾಂತಂತ್ರ್ಯಾದಿ ಪ್ರದರ್ಶ್ಯ ರಾಗಾದ್ಯುತ್ಪಾದನದ್ವಾರಾ ದುಃಖಮನುಭಾವಯತೀತಿ'**

(ಜೀವನ ಸ್ವರೂಪಚೈತನ್ಯವು ವಾಸ್ತವಿಕವಾಗಿ ಸ್ವಪ್ರಕಾಶ. ಹಾಗಿದ್ದರೂ ತನ್ನಧೀನವಾದ ಪ್ರಕೃತಿಯಿಂದ ಹಾಗೂ ಅಚಿಂತ್ಯಾದ್ಭುತಶಕ್ತಿಯಿಂದ ಸ್ವರೂಪಚೈತನ್ಯವನ್ನು ಭಗವಂತನು ಆಚ್ಛಾದಿಸುವನು. ಆ ಭಗವಂತನೇ ಪ್ರಕೃತಿಯಲ್ಲಿ ಪ್ರವೇಶಿಸಿ ಅದು ಮಹತ್ತತ್ವ ಅಹಂಕಾರಾದಿರೂಪದಿಂದ ಪರಿಣತವಾಗುವಂತೆ ಮಾಡುತ್ತಾನೆ. ಬಳಿಕ ಪರಿಣತವಾದ ಪ್ರಕೃತ್ಯಂಶಗಳೊಂದಿಗೆ ಜೀವನಿಗೆ ಸಂಬಂಧವನ್ನುಂಟುಮಾಡಿ ಜೀವನಲ್ಲಿ ಇಲ್ಲದೇ ಇರುವ ಕರ್ತೃತ್ವ ಸ್ವಾತಂತ್ರ್ಯಾದಿಗಳನ್ನು ತೋರಿಸುವನು. ತನ್ಮೂಲಕರಾಗಾದಿಗಳನ್ನು ಹುಟ್ಟಿಸಿ ದುಃಖಾನುಭವವನ್ನು ತಂದುಕೊಡುವನು .)

ಹೀಗೆ ಜೀವನ ದುಃಖಾದಿಗಳಿಗೆ ಕಾರಣಗಳಾದ್ದರಿಂದ ಪ್ರಕೃತಿಗಳು ದುಷ್ಟ ಎನಿಸಿವೆ.

**'ಅಜಾಂ ಅಜಿತ ದೋಷಗೃಹೀತಗುಣಾಂ'** (*ದುಃಖಾದಿದೋಷೈಃ ಗೃಹೀತಾಃ ಆವೃತಾಃ ಆನಂದಾದಿಗುಣಾಃ ಯಯಾ ಸಾ ಪ್ರಕೃತಿಃ ದೋಷಗೃಹೀತಗುಣಾ, ತಾಂ*) (ಭಾಗವತ 10-94-5) (ಯಾವ ಪ್ರಕೃತಿಯಿಂದ ದುಃಖಾದಿದೋಷಗಳ ಮೂಲಕ ಜೀವರ ಆನಂದಾದಿಗುಣಗಳು ಆವೃತವಾಗಿವೆಯೋ ಆ ಪ್ರಕೃತಿಯು '**ದೋಷಗೃಹೀತಗುಣಾ**' ಎನಿಸಿದೆ. **ಅಜಿತ** = ಯಾರಿಂದಲೂ ಜಿತನಾಗದಿರುವ ಭಗವಂತನನೇ! ಅನಾದಿಯಾದ ಪ್ರಕೃತಿಯನ್ನು **ಜಹಿ** = ಕೊಲ್ಲು) ಎಂಬ ಭಾಗವತವಚನದಿಂದಲೂ ಪ್ರಕೃತಿಗೆ ದುಷ್ಟತ್ವವು ಸಿದ್ಧವಾಗುವುದು.

ಜಡವಾದ ಪ್ರಕೃತಿಯು ಚಿತ್ಪ್ರಕೃತಿಯ ಮೂಲಕ ಬಂಧಕವಾಗಿದೆ. ಚಿತ್ಪ್ರಕೃತಿಯು ಬಂಧಕಳಾಗಿರುವಳು ಎಂಬ ವಿಷಯ '**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ**' ಎಂಬ ಗೀತಾವಚನದಿಂದ ಸಿದ್ಧವಾಗಿದೆ. '**ಏಷಾ ತು ಅಸ್ಯ ಮೋಹಿಕಾ**' ಎಂಬ ವ್ಯಾಖ್ಯಾನದಿಂದ, ಬೇರೆಯ ಎರಡು ಪ್ರಕೃತಿಗಳಿವೆ. ಅವು '**ಅಥಾನ್ಯೇ ಪ್ರಕೃತೀ ದುಷ್ಟೇ**' ಎಂಬ ಪ್ರಮಾಣದಿಂದ ಸಿದ್ಧವಾಗಿವೆ.

ಇದರ ಮೇಲೆ ಬರುವ ಪ್ರಶ್ನೆ. ಅನಾದಿಯಾದ ಪ್ರಕೃತಿಗೆ ಯಾವರೀತಿಯಾದ

ನಾಶವನ್ನು ಒಪ್ಪಬೇಕು ? ನ್ಯಾಯಸುಧಾದಲ್ಲಿ ಹೇಳಿದಂತೆ ಸ್ವರೂಪನಾಶವನ್ನೇ ಇಟ್ಟುಕೊಳ್ಳಿ ಎಂದು ಹೇಳಲಾಗದು . ಏಕೆಂದರೆ ಎರಡೂ ದುಷ್ಟಪ್ರಕೃತಿಗಳಿಗೆ ಸ್ವರೂಪನಾಶ-ವನ್ನಂಗೀಕರಿಸಿದರೆ ಶ್ರುತಿಗೀತಾತಾತ್ಪರ್ಯದಲ್ಲಿ ಉದಾಹರಿಸಿದ ಶ್ರುತಿಯಲ್ಲಿ '**ಹನ ದ್ರಾವಯ**' ಎಂದು ಹೇಳಿರುವುದು ಕೂಡಲಾರದು. ಸ್ವರೂಪಧ್ವಂಸದ ಪಕ್ಷದಲ್ಲಿ '**ಹನ**' ಎಂದೇ ಹೇಳಬೇಕಿತ್ತು. ಇದಲ್ಲದೇ ಮೇಲೆ ಉದಾಹರಿಸಿದ ಸ್ಮೃತಿಯಲ್ಲಿಯೂ '**ವ್ಯಾಘುಟ್ಯ -ಸರಿಸಿ**' ಎಂದು ಹೇಳಿದ್ದೂ ಸರಿಹೋಗುವದಿಲ್ಲ ಎಂದು ಆಕ್ಷೇಪಿಸುವಂತಿಲ್ಲ. ಏಕೆಂದರೆ ವ್ಯಾಘುಟ್ಯ ಎಂಬುದಕ್ಕೆ **ನಿಹತ್ಯ** = ಸಂಹರಿಸಿ ಎಂಬ ಅರ್ಥವನ್ನಂಗೀಕರಿಸುವದರಿಂದ ಯಾವ ವಿರೋಧವೂ ಇಲ್ಲ . ಅಥವಾ ಮೊದಲು **ದ್ರಾವಯ** = ದೂರಕ್ಕೆ ತಳ್ಳು , ನಂತರ **ಹನ** = ಸಂಹರಿಸು ಎಂದು ಅರ್ಥಮಾಡಲು ಬರುವ ದರಿಂದಲೂ, ಯಾವುದೇ ವಿರೋಧವಿಲ್ಲ .

## ಭಾಷ್ಯದೀಪಿಕಾದಲ್ಲಿ ಉದಾಹೃತ ಗ್ರಂಥಗಳು

ಭಾಷ್ಯದೀಪಿಕಾಕಾರರು ವ್ಯಾಖ್ಯಾನ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಅನೇಕ ಗ್ರಂಥಗಳನ್ನು ಉಲ್ಲೇಖಿಸುತ್ತಾರೆ. ಅವುಗಳನ್ನು ಈ ಕೆಳಗಿನಂತೆ ಸಂಗ್ರಹಿಸಬಹುದು.

1. ತತ್ತ್ವಪ್ರದೀಪ
2. ಸತ್ತರ್ಕದೀಪಾವಲೀ
3. ನ್ಯಾಯದೀಪಿಕಾ
4. ತತ್ತ್ವೋದ್ಯೋತಟೀಕಾ
5. ಗೀತಾತಾತ್ಪರ್ಯ
6. ಭಾವಬೋಧ
7. ವ್ಯಾಸತೀರ್ಥೀಯ (ಛಾಂದೋಗ್ಯಭಾಷ್ಯ)
8. ಶ್ರೀಮನ್ನ್ಯಾಯಸುಧಾ
9. ಗೀತಾಭಾಷ್ಯ
10. ಐತರೇಯಭಾಷ್ಯ
11. ತತ್ತ್ವಪ್ರಕಾಶಿಕಾ
12. ಪ್ರಮೇಯದೀಪ
13. ತತ್ವನಿರ್ಣಯಟೀಕಾ
14. ಕಾಠಕಭಾಷ್ಯ

15. ಚಂದ್ರಿಕಾ
16. ಭಾಗವತತಾತ್ಪರ್ಯ
17. ಬೃಹದ್ ಭಾಷ್ಯ
18. ಮಾಂಡೂಕಭಾಷ್ಯ
19. ಅನುವ್ಯಾಖ್ಯಾನ
20. ಭಾರತತಾತ್ಪರ್ಯನಿರ್ಣಯ
21. ಷಟ್ ಪ್ರಶ್ನಭಾಷ್ಯ
22. ಛಾಂದೋಗ್ಯಭಾಷ್ಯ - ಇತ್ಯಾದ್ಯನೇಕ ಗ್ರಂಥಗಳು .

## ಪ್ರಕೃತ ಮುದ್ರಣದ ಬಗ್ಗೆ .

ಶ್ರೀಜಗನ್ನಾಥಯತಿಗಳ 'ಭಾಷ್ಯದೀಪಿಕಾಗ್ರಂಥವು, ಸುಮಾರು ನಲವತ್ನಾಲ್ಕು ವರ್ಷಗಳ ಹಿಂದೆ ಕ್ರಿ.ಶ. 1964ರಲ್ಲಿ ಮುದ್ರಿತವಾಗಿತ್ತು. ವ್ಯಾಸರಾಜಮಠಾಧೀಶರಾದ **ಶ್ರೀಶ್ರೀವಿದ್ಯಾಪ್ರಸನ್ನತೀರ್ಥ ಶ್ರೀಪಾದರ** ಆದೇಶದ ಮೇರೆಗೆ ಪಂಡಿತಪ್ರಕಾಂಡರಾದ ಮಾಗಡಿ ರಂಗನಾಥಾಚಾರ್ಯರು ಈ ಗ್ರಂಥವನ್ನು ಸಂಶೋಧಿಸಿ ಸಂಪಾದಿಸಿದ್ದರು. ಬೆಂಗಳೂರುನಗರದ **'ಭಾಷ್ಯದೀಪಿಕಾ ಪ್ರಕಾಶನ ಸಮಿತಿ'** ಯಿಂದ ಈ ಗ್ರಂಥ ಮುದ್ರಿತವಾಗಿತ್ತು. ಈಗಿನಷ್ಟು ಉತ್ತಮವಾದ ತಾಂತ್ರಿಕ ಸೌಲಭ್ಯಗಳಿಲ್ಲದ ಆ ಕಾಲದಲ್ಲಿ ಹಸ್ತಪ್ರತಿಗಳನ್ನು ಸಂಶೋಧಿಸಿ ಸಂಪಾದಿಸುವದು ಸುಲಭದ ಕೆಲಸವಾಗಿರಲಿಲ್ಲ. ಅಂತಹ ಕಾಲದಲ್ಲಿ ಕಷ್ಟಪಟ್ಟು ವಿದ್ವಾಂಸರ ಸಹಾಯದಿಂದ ಈ ಗ್ರಂಥವನ್ನು ಲಭ್ಯಹಸ್ತಪ್ರತಿಗಳೊಂದಿಗೆ ಸಂಶೋಧಿಸಿ ಸಂಪಾದಿಸಿದ **ಪಂ. ಮಾಗಡಿರಂಗನಾಥಾಚಾರ್ಯರ** ಕಾರ್ಯ ವರ್ಣಿಸಲಸದಳ. ಅವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಪ್ರಕೃತ ಈ ಗ್ರಂಥದ ಮುದ್ರಣಕ್ಕೆ ಎರಡು ಮುಖ್ಯ ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಮೈಸೂರು ಪ್ರಾಚ್ಯವಿಶ್ವವಿದ್ಯಾಲಯದ ಒಂದು ಹಸ್ತಪ್ರತಿ ಹಾಗೂ ಧಾರವಾಡದ **ಪಂ. ಶ್ರೀಯುತ ಗೋವಿಂದರಾವ್ ನವಲಗುಂದ್** ಅವರು ನೀಡಿದ ಇನ್ನೊಂದು ಹಸ್ತಪ್ರತಿ ಈ ಎರಡು ಹಸ್ತಪ್ರತಿಗಳ ಸಹಾಯದಿಂದ ಆದಷ್ಟು ಶುದ್ಧಪಾಠಗಳನ್ನು ನೀಡುವ ಪ್ರಯತ್ನ ಮಾಡಲಾಗಿದೆ. 'ಮೈಸೂರು ಪ್ರಾಚ್ಯವಿದ್ಯಾಲಯದ ಹಸ್ತಪ್ರತಿ' ಯಲ್ಲಿ ಅನೇಕ ಮುದ್ರಣದೋಷಗಳಿದ್ದು ಅಶುದ್ಧವಾಗಿತ್ತು. ಇನ್ನೊಂದು ಹಸ್ತಪ್ರತಿಯಲ್ಲಿ ಅಲ್ಲಲ್ಲಿ ಮುದ್ರಣ ದೋಷಗಳಿದ್ದರೂ ಮೊದಲಿನ ಹಸ್ತಪ್ರತಿಗಿಂತ ಉತ್ತಮವಾಗಿತ್ತು. ಈ ಎರಡು ಹಸ್ತಪ್ರತಿಗಳ ಸಹಾಯದಿಂದ ಲುಪ್ತವಾದ , ಹಿಂದೆ ಮುದ್ರಣಗೊಂಡ ಪುಸ್ತಕದಲ್ಲಿ

ಇಲ್ಲದೇ ಇದ್ದ ಅನೇಕ ವಾಕ್ಯಗಳನ್ನು ಕಂಡುಹಿಡಿಯಲು ಸಾಧ್ಯವಾಗಿದೆ. ಅಂತಹ ವಾಕ್ಯಗಳ ಪಟ್ಟಿಯನ್ನು ಕೊನೆಗೆ ನೀಡಲಾಗಿದೆ. ಇದಲ್ಲದೇ ಪಾಠಾಂತರಗಳನ್ನು ನಮೂದಿಸುವದಕ್ಕೆ ಈ ಎರಡು ಹಸ್ತ ಪ್ರತಿಗಳು ಬಹಳ ಉಪಯುಕ್ತವಾಗಿವೆ. ಮೈಸೂರು ಪ್ರಾಚ್ಯವಿಶ್ವವಿದ್ಯಾಲಯದ ಹಸ್ತ ಪ್ರತಿಯನ್ನು '**क**', ಎಂಬ ಸಂಕೇತಾಕ್ಷರದಿಂದ , ಇನ್ನೊಂದು ಹಸ್ತಪ್ರತಿಯನ್ನು '**ख**' ಎಂಬ ಸಂಕೇತಾಕ್ಷರದಿಂದ ಸಂಕೇತಿಸಲಾಗಿದೆ. ಓದುಗರ ಅನುಕೂಲಕ್ಕಾಗಿ ಅಡಿಟಿಪ್ಪಣಿಯಲ್ಲಿ ಭಾಷ್ಯದ ಹೃಷೀಕೇಶೀಯ ಪಾಠಾಂತರಗಳನ್ನು ಕೊಡಲಾಗಿದೆ. ಅದನ್ನು ''**ह**' ಎಂದು ಸಂಕೇತಾಕ್ಷರದಿಂದ ಸೂಚಿಸಲಾಗಿದೆ.

| लुप्तवाक्यसङ्ग्रहः | पृ.सं. |
|---|---|
| १. अनेन चक्षुरादीनां परमात्माप्रमापकत्वमुक्तं भवति । | १० |
| २. बहुव्रीहिरयम् | ४३ |
| ३. सिद्धेन इति शेषः । | १५४ |
| ४. न चाप्रयोजकता । उत्पत्त्यसम्भवात् । | १६२ |
| ५. अनादिभावस्य पुनर्नित्यत्वोक्त्याऽनादित्वश्रुतेः स्पष्टायाः निवकाशत्वेन प्राबल्यमुक्तं भवति । | ३०३ |
| ६. स्वार्थे ष्यञ् । | ३०५ |
| ७. ननु स्वयमेव स्यादित्यत आह | ३३० |
| ८. सावधारणमेतत् । | ३३० |
| ९. प्राणे प्राणस्य | ३३० |
| १०. तत्साधकाभावात् । | ३३२ |
| ११. यच्छब्दस्तत्र प्रकृतपरामर्शकः। | ३३८ |
| १२. न सर्व इति | ३४९ |
| १३. किन्तु केवलेश्वरेच्छधीनैवेत्यर्थः । | ३५२ |
| १४. चन्द्रिकायामपि विरिश्चस्य पूर्वं मुख्यप्राणत्वाख्यत्वाच्च सङ्गतिरित्युक्तम् । | ३५३ |

| मुद्रितपाठः | संशोधितपाठः | पृ.सं |
|---|---|---|
| १. 'अनेन द्वितीयाध्यायेन सूत्रकार इत्यर्थः। | अनेन द्वितीयाध्यायेन सूत्रकार इति शेषः। | १ |
| २. इतरेषामित्यस्योत्तरस्मृत्युक्तानां | इतरेषामित्यस्य इतरस्मृत्युक्तानां | ५ |
| ३. जगत्कारणत्वादौ | प्रत्यक्षायोग्ये जगत्कारणत्वादौ | ५ |
| ४. प्रसिद्धौ हि शब्दः | प्रसिद्धौ वा हिशब्दः | १० |
| ५. तेषां | एतेषां | १३ |
| ६. अनुपलभ्यमानफलसाधनस्य | अनुपलभ्यमानसाधनार्थस्य | १४ |
| ७. मृदिति | मृदादीति | १६ |
| ८. नाऽकाङ्क्षाक्रमेण | नास्माकमाकाङ्क्षाक्रमेण | १९ |
| ९. परस्परविरोधः | 'यतो वा' इत्यादिश्रुतेः 'असद् वा' इत्यादिना | २० |
| १०. अवधारणमात्रशब्दशिरस्कश्च | अवधारणार्थकमात्रशब्दशिरस्कश्च | २५ |
| ११. पदार्थासत्वसाधने | सर्वासत्वसाधने | २६ |
| १२. ह्येकीभवन्ति | त्वेकीभवन्तीतिपदेन | ३८ |
| १३. अयमर्थ उक्त इति शेषः | अयमर्थ उक्त इति वाक्यशेषः | ४० |
| १४. कर्तृव्यतिरिक्त | मृत्पिण्डदण्डादिरूपकर्तृव्यतिरिक्त | ४३ |
| १५. आक्षेप इति | आक्षेप एवेति | ४५ |
| १६. जीवः स्वतन्त्रकर्ता | जीव एव स्वतन्त्रकर्ता | ६३ |
| १७. वक्तुं शक्यं | न त्यक्तुं शक्यं | ६४ |
| १७. तद्वा | यद्वा | ६६ |
| १८. जीवकर्तृत्वं | जीवकर्तृत्वं युज्यते | ७६ |
| १९. स्वमतेऽपीश्वरप्रेरितचेतन-प्रवृत्त्यभ्युपगमात् | स्वमतेऽपीश्वरप्रेरिताचेतन-प्रवृत्त्यभ्युपगमात् | १०१ |
| २०. उत्पत्तेरप्यभावः | तदुत्पत्तेरप्यभावः | १२७ |

| | | |
|---|---|---|
| २१. कायपरिमाणाभ्युपगमेऽपि | कायपरिमाणत्वाभ्युपगमेऽपि | १५० |
| २२. विकारोऽप्युपगम्यते | विकारोऽभ्युपगम्यते | १५२ |
| २३. सम्बन्धोऽयुक्तः | सम्बन्धः योऽयुक्तः | १५७ |
| २४. अनुपपत्तिद्वयपरिहार-निरासकत्वात् | अनुपपत्तिद्वयनिरासकत्वात् | १५८ |
| २५. न त्वव्याकृतमिति | न त्वव्याकृतमपि | १७९ |
| २६. मध्यमवयः | स्थितिः | १८१ |
| २७. इत्याह | इत्यत आह | १८८ |
| २८. निमित्तात् | निमित्तात् सत् | १८८ |
| २९. आत्मा चेत्यन्वितश्चशब्दः | आत्मा चेत्यप्यन्विश्चशब्दः | २२१ |
| ३०. इत्यर्थः | इति श्रुत्यर्थः | २२१ |
| ३१.एकवचनवान्तशब्दैर्द्विवचनान्त-शब्दैर्बहुवचनान्तशब्दैश्चोच्यते | एकवचनान्तशब्दैस्तथा वेदगतैर्द्विशब्दैः द्विवचनान्तशब्दैः बहुशब्दैः बहुवचनान्तशब्दैश्चोच्यते | २३३ |
| ३२. एकस्मिन्नेकशब्दप्रयोगं | एकस्मिन्ननेकशब्दप्रयोगं | २३३ |
| ३३. नियमनकर्तृत्वं | नियमेन कर्तृत्वं | २६६ |
| ३४. यो भगवन्मूर्तीः | येन भगवन्मूर्तीः | २७८ |
| ३५. भिन्नांशो न | भिन्नांशो दुःखी वा न | २८३ |
| ३६. किन्तु एवंविधः स्वरूपांश इत्यनुवृत्त्या योजना। | किन्त्वभिन्नांशः सुखी चेति सूत्रखण्डार्थ उक्तो भवति | २८३ |
| ३७. प्रतिज्ञांशं | अत्र गौणीति प्रतिज्ञांशं | ३०५ |
| ३८. सम्राट् | सम्म्राट् स्वामी | ३३३ |
| ३९. सङ्कोचनिरासाय सर्वशब्दः | सङ्कोचनिरासाय द्विः सर्वशब्दः | ३३७ |
| ४०. पिप्पलादऋर्षि प्रति | पिप्पलादेन | ३५२ |

ಇದೇ ರೀತಿ ಬೇಕಾದಷ್ಟು ಉದಾಹರಣೆಗಳು ಗ್ರಂಥದ ಉದ್ದಗಲಕ್ಕೂ ವ್ಯಾಪಿಸಿವೆ. ಪುಟಗಳು ಹೆಚ್ಚಾಗುವ ಭಯದಿಂದ ಅವನ್ನು ಇಲ್ಲಿ ಉದಾಹರಿಸಲಾಗಿರುವುದಿಲ್ಲ. ಸ್ಥಾಲೀಪುಲಾಕ- ನ್ಯಾಯದಂತೆ ಕೆಲವು ಉದಾಹರಣೆಗಳನ್ನು ಮಾತ್ರ ಕೊಡಲಾಗಿದೆ.

## ಕೃತಜ್ಞತಾನಿವೇದನೆ

'**ವಿದ್ಯಾಧನಂ ಸರ್ವಧನಪ್ರಧಾನಂ**' ಎಂಬ ಸುಭಾಷಿತದಂತೆ ಎಲ್ಲ ಸಂಪತ್ತಿಗಿಂತಲೂ ಮಿಗಿಲಾದುದು ವಿದ್ಯಾಸಂಪತ್ತು. ಇಂತಹ ಸಂಪತ್ತನ್ನು ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನವಸತಿಗಳೊಂದಿಗೆ ಉಚಿತವಾಗಿ ವಿತರಿಸುತ್ತಿರುವ ಮಹನೀಯರು ಪ್ರಾತಃ ಸ್ಮರಣೀಯರಾದ **ಪರಮಪೂಜ್ಯ ಶ್ರೀ ಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರು.** 'ಪೂರ್ಣಪ್ರಜ್ಞವಿದ್ಯಾಪೀಠ' 'ಪೂರ್ಣಪ್ರಜ್ಞಸಂಶೋಧನಮಂದಿರ' 'ಅಖಿಲಭಾರತಮಾಧ್ವಮಹಾಮಂಡಲ' ಮುಂತಾದ ಅನೇಕ ಸಂಸ್ಥೆಗಳನ್ನು ಹುಟ್ಟು ಹಾಕಿ ತನ್ಮೂಲಕ ಧಾರ್ಮಿಕಜಾಗೃತಿಯನ್ನುಂಟು ಮಾಡಿದ ಹಿರಿಮೆ ಗರಿಮೆ ಇವರದು. ಇಂತಹ ಮಹನೀಯರಿಂದ ಉದ್ಧೃತರಾಗಿ ತಮ್ಮ ಬಾಳನ್ನು ಸಾರ್ಥಕಪಡಿಸಿಕೊಂಡವರು ಅದೆಷ್ಟೋ ಮಂದಿ. ಅಂತಹ **ಪರಮಪೂಜ್ಯಶ್ರೀಪಾದಂಗಳವರ** ಪಾದಾರವಿಂದಗಳಲ್ಲಿ ಭಕ್ತಿಪೂರ್ವಕಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಈ ಗ್ರಂಥದ ಮುದ್ರಣದ ವೆಚ್ಚವನ್ನು ಭರಿಸಲು ತುಂಬುಮನಸ್ಸಿನಿಂದ ಸಮ್ಮತಿಸಿದ 'ರಾಷ್ಟ್ರೀಯಸಂಸ್ಕೃತಸಂಸ್ಥಾನ'ದ ಕುಲಪತಿಗಳಾದ **ಪ್ರೊ. ವಿ. ಕುಟುಂಬಶಾಸ್ತ್ರಿಗಳಿಗೆ** ನಾನು ಆಭಾರಿಯಾಗಿದ್ದೇವೆ.

ಈ ಗ್ರಂಥದ ಸಂಪಾದನೆಗೆ ಉಪಯುಕ್ತವಾದ ಸಲಹೆ ನೀಡಿದ ತಿರುಪತಿ ರಾಷ್ಟ್ರಿಯ ಸಂಸ್ಕೃತ ವಿದ್ಯಾಪೀಠದ ವಿಶ್ರಾಂತ ಕುಲಪತಿಗಳು ಪೂರ್ಣಪ್ರಜ್ಞ ಸಂಶೋಧನ ಮಂದಿರದ ಅಧ್ಯಕ್ಷರೂ ಆದ ಪ್ರೊ. ಡಿ. ಪ್ರಹ್ಲಾದಾಚಾರ್ಯರಿಗೆ ಆದರದ ಕೃತಜ್ಞತೆಗಳು.

ಈ ಗ್ರಂಥ ಸಂಪಾದನೆಗೆ ಉಪಯುಕ್ತವಾದ ಸೂಕ್ತಸಲಹೆಗಳನ್ನು ಸಕಾಲಕ್ಕೆ ನೀಡಿ ನನಗೆ ಉತ್ತೇಜನವನ್ನಿತ್ತವರು ಸಂಶೋಧನಮಂದಿರದ ನಿರ್ದೇಶಕರಾದ **ಡಾ. ಎ.ವಿ. ನಾಗಸಂಪಿಗೆ**ಯವರು . ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಗ್ರಂಥಸಂಪಾದನೆಯ ಸಂದರ್ಭದಲ್ಲಿ ಎದುರಾದ ಕೆಲವು ಕ್ಲಿಷ್ಟ ಸಮಸ್ಯೆಗಳನ್ನು ಪರಿಹರಿಸಲು ನೆರವಾದ ವಿದ್ಯಾಪೀಠದ ಭೂತಪೂರ್ವ ಪ್ರಾಂಶುಪಾಲರಾದ ನನ್ನ ಗುರುಗಳಾದ **ಶ್ರೀಹಯವದನಪುರಾಣಿಕ**ರಿಗೆ ಹಾಗೂ ವಿದ್ಯಾಪೀಠದ ನಿವೃತ್ತ ಅಲಂಕಾರಪ್ರಾಧ್ಯಾಪಕರಾದ **ಶ್ರೀಎ. ಅನಂತತಂತ್ರಿ**ಗಳಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಸಂಶೋಧನಾಕಾರ್ಯದಲ್ಲಿ ಸೂಕ್ತ ಸೂಚನೆಗಳನ್ನಿತ್ತು ಸಹಕರಿಸಿದ ಸಂಶೋಧನ ಮಂದಿರದ ಉಪನಿರ್ದೇಶಕರಾದ **ಶ್ರೀಶಂಕರನಾರಾಯಣ ಅಡಿಗ**ರಿಗೆ, ಹಾಗೂ **'ಸೂತ್ರದೀಪಿಕಾದ'** ಶುದ್ಧಪ್ರತಿಯನ್ನು ನೀಡಿ ಸಹಕರಿಸಿದ ವಿದ್ವಾನ್. **ಕಡ್ಡಿ ಬದರೀನಾರಾಯಣಾಚಾರ್ಯ**ರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

ಹಾಗೆ ಉಪೋದ್ಘಾತದ ಭಾಗವನ್ನು ಆಂಗ್ಲಭಾಷೆಗೆ ಅನುವಾದಿಸಿದ ಪಂ. ಯು. ಬಿ. ಗುರುರಾಜಾಚಾರ್ಯರಿಗೆ ನಾನು ಆಭಾರಿಯಾಗಿದ್ದೇನೆ .

ಇದಲ್ಲದೇ ಕರಡಚ್ಚು ಪ್ರತಿ ತಿದ್ದುವಲ್ಲಿ ಆದಮ್ಯ ಉತ್ಸಾಹದಿಂದ ಸಹಕರಿಸಿದ ಯುವ ವಿದ್ವಾಂಸರಾದ **ಭೀಮಸೇನ** ಹಾಗೂ **ರಾಮಚಂದ್ರ** ಎನ್ನುವರು ನಿಜಕ್ಕೂ ಅಭಿನಂದನಾರ್ಹರಾಗಿದ್ದಾರೆ.

ಇತಿ ಸುಧೀಜನ ವಿಧೇಯ

**ವಿದ್ವಾನ್ ರಂಗನಾಥ ಕಟ್ಟಿ**

## INTRODUCTION

Bad time was reigning during Dwaparayuga. Sage Gawtama's curse had caused diminishing of true knowledge. Devata's prayer to Shri Hari for His manifestation was answered. He incarnated Himself as Vyasa in Yamuna's island in Satyavati and Parashara. He divided the heap of vedas and became Vedavyasa. For the benefit of Stree-Shudra and the like composed Mahabharata and eighteen puranas. To enable proper decipher of Vedas He composed Brahmasutras and saved the right people. Due to Him, the literature in Sanskrit grew the richest.

Shri Vadiraja GuruSarvabhouma elucidated it as

अष्टादशपुराणानां कर्ता सत्यवतीसुतः ।
तदुक्तौ कस्य न श्रद्धा यदुच्छिष्टं जगत्त्रयम् ॥

सर्वोपनिषदामर्थं निर्णेतुं बादरायणः ।
निर्ममे ब्रह्मसूत्राणि सूचनात् सूत्रमुच्यते ॥

Such Brahmasutras were also tried to be polluted by wrong interpretations by some. At this juncture Shri Vayudeva as per the orders of the Bhagavan took birth as Madhwa on the earth and wrote a Bhashya which others couldn't do to the Brahmasutras. He condemned and rejected all other Bhashyas with guinine quotations from the Vedas.

**2. The Excellence of Sutra Bhashya.**

Acharya Madhwa's Bhashya cannot be negated by any one at any time as much as he cannot be vanquished by any other. His Bhashya confirms wholly with the definition ---

सूत्रार्थो वर्ण्यते यत्र पदैः सूत्रानुकारिभिः ।
स्वपदानि च वर्ण्यन्ते भाष्यं भाष्यविदो विदुः ।

This Bhashya's depth cannot be easily understood by the seekers and to the opponents it is a nightmare. Shri Narayapandita describes it like सौम्यकान्ति च विपक्षभीषणम् in Madhwavijaya.

The following four Vyakhyanas to this Bhashya help us in understanding its import -

1. Sri Trivikramapandita's ----- TATWAPRADEEPA.
3. Sri Padmanabhateertha's ----- SATTARKA DEEPAVALI.
2. Sri Jayateertha's ----- TATWAPRAKASHIKA.
3. Sri Jagannathayati's ----- BHASHYADEEPIKA.

Bhashyadeepika gives helping hand to know Bhashya's overall import in its simplicity.

**3. Shri Jagannathateertha and his Bhashyadeepika .**

Shri Jagannathayati was the Yatishishya of Shri RaghunathaTeertha of Shri Vyasarajaparampara. Late Dr. B.N.K.Sharma in his Dwaita Vedanta Vangmaya and Itihasa traces his period as between 1755 and 1770 AD for 15 years duration as peethadhipati. He faced with utmost courage and guts many problems in his period. At the time when he was in a tour , some Yavana Attackers pounced on him with the swords on hands, he prayed Lord Narasimha for protection. Then a divine unconquerable force emerged out from a nearby mango tree and drove away the devil attackers. This incidence he records in his Mangalapadya of BhashyaDeepika.

आम्रस्तम्भात् समागत्य ताम्रतुण्डान् निहत्य यः ।
नम्रं नौमि जगन्नाथं कम्रोऽपात्तं नृकेसरी ॥

**4. Sage Galava's Incarnation.**

Traditionally Jagannathayati is beleived as sage Galava reborn. A story goes like this.

Once , a scholar was too much worried by the doubts facing him in understanding some Shastriya subjects. None could solve them. He got a dream in which he was told only Sage Galva could clear his doubts. Next day, when Shri Jagannatayati visited his village on his tour, the doubts were expressed by the scholar to him . The Yati cleared all his doubts and blessed. The scholar prostrated to the yati saying ----- 'गालवगुरुभ्यो नमः'

Shri Jagannatayati's whole life was thus dedicated to Sanctified Tatwaprasara, Grantha Rachana and teaching.

